## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

ವಿಷಯ : **ಮಾಬೂಬಿ ಶೌಖತಖಾನ ಶಾಪೂರ** ರವರು **ಉತ್ತರ ಕನ್ನಡ ಜಿಲ್ಲೆ, ಮುಂಡಗೋಡ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ಮುಂಡಗೋಡ ತಾಲ್ಲೂಕು ಪಂಚಾಯತಿ, 10–ನಂದಿಕಟ್ಟಾ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

ಉಲ್ಲೇಖ : 1) ಜಿಲ್ಲಾಧಿಕಾರಿಗಳು, **ಉತ್ತರ ಕನ್ನಡ** ಜಿಲ್ಲೆ ರವರ ಪತ್ರದ ಸಂಖ್ಯೆ: **ಗ್ರಾತಾಜಿಪಂ/ಚುನಾವಣೆ/ವಿವ–281/10–11** ದಿನಾಂಕ: **20–04–2011**

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/102/ಟಿಜಡ್‌ಪಿ/2011, ದಿನಾಂಕ: **07–07–2011**

3) ಜಿಲ್ಲಾಧಿಕಾರಿಗಳು, **ಉತ್ತರ ಕನ್ನಡ** ಜಿಲ್ಲೆ, ರವರ ಪತ್ರ ಸಂಖ್ಯೆ: **ಗ್ರಾತಾಜಿಪಂ/ಚುನಾವಣೆ/ವಿವ–281/10–11** ದಿನಾಂಕ: **10–11–2011**

**ಪ್ರಸ್ತಾವನೆ:**

**ಉತ್ತರ ಕನ್ನಡ ಜಿಲ್ಲೆ, ಮುಂಡಗೋಡ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **10–ನಂದಿಕಟ್ಟಾ** ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಮಾಬೂಬಿ ಶೌಖತಖಾನ ಶಾಪೂರ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಉತ್ತರ ಕನ್ನಡ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **07–07–2011** ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **30–07–2011** ರಂದು **ಮಾಬೂಬಿ ಶೌಖತಖಾನ ಶಾಪೂರ** ರವರಿಗೆ **ಗ್ರಾಮಲೆಕ್ಕಿಗರು ಜಾರಿ ಮಾಡಿದ್ದು,** ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳು ಈ ವಿಷಯದಲ್ಲಿ ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ಮಾಬೂಬಿ ಶೌಖತಖಾನ ಶಾಪೂರ** ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/102(6)/ಟಿಜಡ್‌ಪಿ/2011, ಬೆಂಗಳೂರು ದಿನಾಂಕ: 22–02–2012**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿಮಾಡಿದಾಗ್ಯೂ **ಉತ್ತರ ಕನ್ನಡ ಜಿಲ್ಲೆ ಮುಂಡಗೋಡ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **10–ನಂದಿಕಟ್ಟಾ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ **ಮಾಬೂಬಿ ಶೌಖತಖಾನ ಶಾಪೂರ** ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಮಾಬೂಬಿ ಶೌಖತಖಾನ ಶಾಪೂರ** ರವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು,**
**ರಾಜ್ಯ ಚುನಾವಣಾ ಆಯೋಗ.**

**ಪಿ.ಆರ್. 264**

## ವಾಣಿಜ್ಯ ತೆರಿಗೆಗಳ ಇಲಾಖೆ

**ವಾಣಿಜ್ಯ ತೆರಿಗೆಗಳ ಆಯುಕ್ತರ ಕಛೇರಿ, ವಾಣಿಜ್ಯ ತೆರಿಗೆ ಕಾರ್ಯಾಲಯ, ಗಾಂಧಿನಗರ, ಬೆಂಗಳೂರು,**

**ಅಧಿಸೂಚನೆ**

**ಸಂ.ಪಿಐಓ/ಆರ್‌ಟಿಐ//ಸಿ.ಆರ್–153/11–12, ದಿನಾಂಕ: 26–03–2012.**

**ವಿಷಯ :** ಮಾಹಿತಿ ಹಕ್ಕು ಅಧಿನಿಯಮ 2005 – ಸಾರ್ವಜನಿಕ ಮಾಹಿತಿ ಅಧಿಕಾರಿ, ಮೇಲ್ಮನವಿ ಪ್ರಾಧಿಕಾರವನ್ನು ಮರು ನಿಯೋಜಿಸುವ ಬಗ್ಗೆ.

**ಉಲ್ಲೇಖ :**
1. ಅಧಿಸೂಚನೆ–II ಸಂಖ್ಯೆ.ಎನ್‌ಸಿಸಿಅರ್.55/05–06, ದಿನಾಂಕ : 29–12–2005.
2. ಅಧಿಸೂಚನೆ–II ಸಂಖ್ಯೆ.ಎಂಎಸ್‌ಸಿ/ಐಓ/ಸಿಅರ್.175/06–07, ದಿನಾಂಕ : 03–01–2007.
3. ಅಧಿಸೂಚನೆ–II ಸಂಖ್ಯೆ.ಎಂಎಸ್‌ಸಿ/ಐಓ/ಸಿ.ಅರ್.175/06–07, ದಿನಾಂಕ : 07–11–2008.
4. ಅಧಿಸೂಚನೆ ಸಂಖ್ಯೆ.ಎಂಎಸ್‌ಸಿ/ಐಓ/ಸಿ.ಅರ್.175/06–07, ದಿನಾಂಕ : 06–09–2010.
5. ಕರ್ನಾಟಕ ಮಾಹಿತಿ ಆಯೋಗದ ಆದೇಶ ಸಂಖ್ಯೆ.ಕ.ಮಾ.ಆ.6405, ದೂರು 2010, ದಿನಾಂಕ : 25–01–2011.
6. ವಾಣಿಜ್ಯ ತೆರಿಗೆಗಳ ಆಯುಕ್ತರ ಅಧಿಸೂಚನೆ ಸಂ.ಪಿಐಓ/ಆರ್‌ಟಿಐ/ಸಿ.ಆರ್–153/11–12, ದಿನಾಂಕ : 12–12–2011.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ (6)ರ ಅಧಿಸೂಚನೆಯನ್ವಯ ವಾಣಿಜ್ಯ ತೆರಿಗೆ ಇಲಾಖೆಯಲ್ಲಿನ ವಿವಿಧ ವೃಂದದ ಅಧಿಕಾರಿಗಳನ್ನು ಅನುಬಂಧದ ಅನ್ವಯ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ ಹಾಗೂ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಆದೇಶಗಳ ಮೇಲೆ ಕಾಯ್ದೆಯಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು ಮೇಲ್ಮನವಿ ಪ್ರಾಧಿಕಾರ ಎಂದು ನೇಮಕ ಮಾಡಲಾಗಿತ್ತು. ಸದರಿ ಅಧಿಸೂಚನೆಯನ್ವಯ ಮಾಡಲಾದ ಅನುಬಂಧದವನ್ನು ಮರುಪರಿಶೀಲಿಸಲಾಗಿ, ವಾಣಿಜ್ಯ ತೆರಿಗೆಗಳ ಆಯುಕ್ತರ ಕಚೇರಿಗೆ ಸಂಬಂಧಿಸಿದಂತೆ ಈ ಕೆಳಕಂಡ ಅಂಶಗಳನ್ನು ಗಮನಿಸಲಾಗಿದೆ.

ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಚೇರಿಗೆ ಸಂಬಂಧಿಸಿದಂತೆ ಮೇಲ್ಮನವಿ ಅಧಿಕಾರಿಯು ಪ್ರಸ್ತುತ ವಾಣಿಜ್ಯ ತೆರಿಗೆ ಅಪರ ಆಯುಕ್ತರು(ಕೇಂದ್ರ ಕಚೇರಿ)–1,ಬೆಂಗಳೂರು ಇವರು ಆಗಿರುತ್ತಾರೆ. ಎಲ್ಲಾ ಶಾಖೆಗಳಲ್ಲೂ ವಾಣಿಜ್ಯ ತೆರಿಗೆ ಅಪರ ಆಯುಕ್ತರುಗಳು/ವಾಣಿಜ್ಯ ತೆರಿಗೆ ಜಂಟಿ ಆಯುಕ್ತರುಗಳು ಶಾಖಾ ಮುಖ್ಯಸ್ಥರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು ಆಡಳಿತಾತ್ಮಕ ಹಿತದೃಷ್ಟಿಯಿಂದ ಹಾಗೂ ಮನವಿ ಪ್ರಕರಣಗಳನ್ನು ಶೀಘ್ರವಾಗಿ ವಿಲೇವಾರಿ ಮಾಡಲು ಅನುಕೂಲವಾಗುವ ಹಾಗೆ ಶಾಖಾನುಸಾರ ವಾಣಿಜ್ಯ ತೆರಿಗೆ ಅಪರ ಆಯುಕ್ತರುಗಳನ್ನು / ವಾಣಿಜ್ಯ ತೆರಿಗೆ ಜಂಟಿ ಆಯುಕ್ತರುಗಳನ್ನು ಮರುನಿಯೋಜನೆ ಮಾಡುವುದು ಸೂಕ್ತವೆಂದು ಅಭಿಪ್ರಾಯಪಡಲಾಗಿದೆ. ವಾಣಿಜ್ಯ ತೆರಿಗೆಗಳ ಆಯುಕ್ತರ ಶಾಖೆ ಹಾಗೂ ವಾಣಿಜ್ಯ ತೆರಿಗೆ ಅಪರ ಆಯುಕ್ತರುಗಳ ಶಾಖೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಆಪ್ತ ಸಹಾಯಕರ ಶಾಖೆಗೆ ಸಂಬಂಧಿಸಿದಂತೆ ಸಾರ್ವಜನಿಕ ಮಾಹಿತಿ ಅಧಿಕಾರಿಯನ್ನು ನಿಯೋಜಿಸುವ ಅವಶ್ಯಕತೆ ಇರುತ್ತದೆ.

ಈ ಹಿನ್ನಲೆಯಲ್ಲಿ ಅಧಿಸೂಚನೆಗೆ ಸಂಬಂಧಿಸಿದಂತೆ ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ವಾಣಿಜ್ಯ ತೆರಿಗೆ ಅಪರ ಆಯುಕ್ತರು/ವಾಣಿಜ್ಯ ತೆರಿಗೆ ಜಂಟಿ ಆಯುಕ್ತರುಗಳನ್ನು ಶಾಖಾನುಸಾರ ಹಾಗೂ ಕರ್ತವ್ಯಗಳಿಗನುಗುಣವಾಗಿ ಮೇಲ್ಮನವಿ ಪ್ರಾಧಿಕಾರವನ್ನು ಹಾಗೂ ವಾಣಿಜ್ಯ ತೆರಿಗೆ ಆಯುಕ್ತರ ಹಾಗೂ ವಾಣಿಜ್ಯ ತೆರಿಗೆ ಅಪರ ಆಯುಕ್ತರುಗಳ ಆಪ್ತಶಾಖೆಗಳಿಗೆ ಸಂಬಂಧಿಸಿದಂತೆ ಕರ್ತವ್ಯ ನಿರ್ವಹಿಸಲು ಸಾರ್ವಜನಿಕ ಮಾಹಿತಿ ಅಧಿಕಾರಿಯನ್ನು ಮರು ನೇಮಕ ಮಾಡಿ ಈ ಅಧಿಸೂಚನೆಗೆ ಲಗತ್ತಿಸಿದ ಅನುಬಂಧದಂತೆ ಮೇಲ್ಮನವಿ ಪ್ರಾಧಿಕಾರ ಹಾಗೂ ಸಾರ್ವಜನಿಕ ಮಾಹಿತಿ ಅಧಿಕಾರಿ ಎಂದು ಮಾರ್ಪಡಿಸಲಾಗಿದೆ. ಈ ಆದೇಶವು ದಿನಾಂಕ : 26–03–2012 ರಿಂದ ಜಾರಿಗೆ ಬಂದಿದ್ದು ಮುಂದಿನ ಆದೇಶದ ತನಕ ಜಾರಿಯಲ್ಲಿರುತ್ತದೆ.

1. ಮಾಹಿತಿ ಹಕ್ಕು ಅಧಿನಿಯಮ 2005 (2005 ರ ಕೇಂದ್ರ ಕಾಯ್ದೆ ಸಂಖ್ಯೆ 22) ಅಡಿ ಈ ಕೆಳಗಿನಂತೆ ವಾಣಿಜ್ಯ ತೆರಿಗೆ ಆಯುಕ್ತರ ಕಚೇರಿಗೆ ಸಂಬಂಧಿಸಿದಂತೆ ಹೊಸದಾಗಿ ಆದೇಶವನ್ನು ಹೊರಡಿಸಲಾಗಿದೆ.
2. ಮಾಹಿತಿ ಹಕ್ಕು ಅಧಿನಿಯಮ 2005 ರ ಸೆಕ್ಷನ್ 19(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅನುಬಂಧದಲ್ಲಿನ ಕಲಂ (4) ರಲ್ಲಿ ನಮೂದಿಸಿದ ವಾಣಿಜ್ಯ ತೆರಿಗೆ ಆಯುಕ್ತರ ಕಚೇರಿಯ ಅಧಿಕಾರಿಗಳನ್ನು ಅನುಬಂಧದಲ್ಲಿನ (3)ನೇ ಕಲಂನಲ್ಲಿ ಕಾಣಿಸಿದ

ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಆದೇಶಗಳ ಮೇಲೆ ಕಾಯ್ದೆಯಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

3. ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 184 ಸಮಯ/2005, ದಿನಾಂಕ : 22–09–2005ರ ಪ್ರಕಾರ ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿತವಾದ ಈ ಕೆಳಗೆ ಸಹಿ ಮಾಡಿದ ಅಧಿಕಾರಿಯು ಮಾಹಿತಿ ಹಕ್ಕು ಕಾಯಿದೆ 2005, (2005ರ ಕೇಂದ್ರ ಕಾಯ್ದೆ ಸಂಖ್ಯೆ.22 ರ ಸೆಕ್ಷನ್ 5(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಾಣಿಜ್ಯ ತೆರಿಗೆಗಳ ಆಯುಕ್ತರ ಕಚೇರಿಗೆ ಸಂಬಂಧಿಸಿದಂತೆ ಅನುಬಂಧದ ಕಲಂ (2) ರಲ್ಲಿ ಕಾಣಿಸಿದ ಶಾಖೆಯ ಕಾರ್ಯವ್ಯಾಪ್ತಿಗೆ ಅನ್ವಯಿಸುವಂತೆ ಅನುಬಂಧದ ಕಲಂ (3) ರಲ್ಲಿ ವಾಣಿಜ್ಯ ತೆರಿಗೆಗಳ ಆಯುಕ್ತರ ಕಚೇರಿಯಲ್ಲಿ ಕರ್ತವ್ಯ ನಿರ್ವಯಿಸುತ್ತಿರುವ ಆಪ್ತ ಶಾಖೆಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕ ಮಾಹಿತಿ ಅಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

**ಪ್ರದೀಪ್ ಸಿಂಗ್ ಖರೋಲ,**
ವಾಣಿಜ್ಯ ತೆರಿಗೆಗಳ ಆಯುಕ್ತರು,
(ಕರ್ನಾಟಕ), ಬೆಂಗಳೂರು.

**ಪರಿಷ್ಕೃತ ಅನುಬಂಧ**

| ಕ್ರ ಸಂ | ಶಾಖೆಯ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|
| 1. | ವಾಣಿಜ್ಯ ತೆರಿಗೆಗಳ ಆಯುಕ್ತರು<br>**ವಾ.ತೆ.ಅ.ಆ.**<br>a) (ಕೇಂದ್ರ ಕಚೇರಿ)–1<br>b) (ಕೇಂದ್ರ ಕಚೇರಿ)–2<br>c) ಕಾನೂನು ಕಾರ್ಯನೀತಿ<br>d) ಗುಪ್ತವಾರ್ತೆ & ಸಮನ್ವಯ<br>e) ಜಾಗೃತಿ<br>f) ಕಾನೂನು ವ್ಯವಹಾರಗಳು<br>g) ಸರಕು ಮತ್ತು ಸೇವಾ ತೆರಿಗೆ – **ಆಪ್ತ ಶಾಖೆ** | ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಮಾಹಿತಿ ಹಕ್ಕು ಕಾಯಿದೆ ಮತ್ತು ಮಾಹಿತಿ ಅಧಿಕಾರಿ) | ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–1<br><br>ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–1<br>ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–2<br>ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಕಾ.&ಕಾ)<br>ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಗು & ಸ)<br>ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಜಾಗೃತಿ)<br>ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಕಾ.ವ್ಯ)<br>ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಸರಕು ಮತ್ತು ಸೇವಾ ತೆರಿಗೆ) |
| 2. | ಸಿಬ್ಬಂದಿ<br>1. ಅಧಿಕಾರಿಗಳು<br>2. ಸಿ & ಡಿ ದರ್ಜೆ ನೌಕರರು | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–1<br>ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–2 |
| 3. | ಕಾನೂನು ಮತ್ತು ಕಾರ್ಯನೀತಿ | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಕಾನೂನು ಮತ್ತು ಕಾರ್ಯನೀತಿ) |
| 4. | ಗುಪ್ತವಾರ್ತೆ ಮತ್ತು ಸಮನ್ವಯ | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಗುಪ್ತವಾರ್ತೆ ಮತ್ತು ಸಮನ್ವಯ) |
| 5. | ಜಾಗೃತಿ | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಜಾಗೃತಿ) |
| 6. | ಕಾನೂನು ವ್ಯವಹಾರಗಳು | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಕಾನೂನು ವ್ಯವಹಾರಗಳು) |
| 7. | ಸರಕು ಮತ್ತು ಸೇವಾ ತೆರಿಗೆ | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಸರಕು ಮತ್ತು ಸೇವಾ ತೆರಿಗೆ) |
| 8. | ಮಾನವ ಸಂಪನ್ಮೂಲ ಅಭಿವೃದ್ಧಿ – ತರಬೇತಿ | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂದ್ರ ಕಚೇರಿ)–1 |

| ಕ್ರ ಸಂ | ಶಾಖೆಯ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|
| 9. | ಆಂತರಿಕ ಲೆಕ್ಕ ಪರಿಶೋಧನೆ ಮತ್ತು ತಪಾಸಣೆ | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಂತರಿಕ ಲೆಕ್ಕ ಪರಿಶೋಧನೆ ಮತ್ತು ತಪಾಸಣೆ) |
| 10. | ಇ–ಆಡಳಿತ | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಇ–ಆಡಳಿತ) |
| 11. | ಶಿಸ್ತು ಕ್ರಮ<br>ಅ) ಎ & ಬಿ ಅಧಿಕಾರಿಗಳು<br>ಆ) ಸಿ & ಡಿ ನೌಕರರು | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–1<br>ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–2 |
| 12. | ಸಂಚಾಲನೆ | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–2 |
| 13. | ವೆಚ್ಚಗಳು | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–1 |
| 14. | ಮಾಹಿತಿ ಹಕ್ಕು ಕಾಯಿದೆ – ವಸೂಲಿ, ಇತರೆ | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–1 |
| 15. | ಸಾಂಖ್ಯಿಕ ಶಾಖೆ<br>ಲೆಕ್ಕಾಧಿಕಾರಿಗಳು<br><br>ಉಪ ನಿರ್ದೇಶಕರು(ಸಾಂಖ್ಯಿಕ) | ಅಧಿಸೂಚನೆ ದಿ:12–12–2011 ರ ಆದೇಶದಂತೆ | ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಜಾಗೃತಿ) ಮತ್ತು ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–1 – **(ಕರ್ತವ್ಯಗಳಿಗನುಗುಣವಾಗಿ)**<br>ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–1 |

ವಾಣಿಜ್ಯ ತೆರಿಗೆಗಳ ಆಯುಕ್ತರು,
(ಕರ್ನಾಟಕ), ಬೆಂಗಳೂರು.

**ಪಿ.ಆರ್. 470**

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.

**ಸಂ:ಇಎಕ್ಸ್‌ಇ:ಸಿಆರ್‌ಎಂ:30:2000–01, ದಿ:27–2–2012**

ಉಪಸ್ಥಿತರು: **ಹೆಚ್.ಎನ್.ಆನಂದ್**, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು**
ಆರಕ್ಷಕ ಉಪ ನಿರೀಕ್ಷಕರು,
ಶ್ರೀಮಂಗಲ ಠಾಣೆ.

**ವಿರುದ್ಧ**

**ಆರೋಪಿ**
1) ಯು.ಟಿ.ವೇಣು ಬಿನ್ ತಮ್ಮಯ್ಯ, ಗೋಣಿಕೊಪ್ಪ
2) ಚಾರಿಮಂಡ ದೇವಯ್ಯ ಬಿನ್ ಬಿದ್ದಪ್ಪ ನಾಲೂರು ಗ್ರಾಮ, ಬಾಳೆಲೆ

**ಪ್ರಕರಣದ ಮುಖ್ಯಾಂಶಗಳು:–**

ದಿ:9–9–2000ರಂದು ಸಂಜೆ ಸುಮಾರು 5.00ಗಂಟೆಗೆ ವಿರಾಜಪೇಟೆ ತಾಲ್ಲೂಕು ಕುಮಟೂರು ಎಂಬಲ್ಲಿ ಜೀಪ್ ಸಂ:ಕೆಎ–12–ಎಂ–572ರಲ್ಲಿ ಆರು ಪ್ಲಾಸ್ಟಿಕ್ ಚೀಲ ಹಾಗೂ 2 ಅಂದಾಜು 35ಲೀ. ಅಳತೆಯ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಸಾರಾಯಿ ಪ್ಯಾಕೆಟುಗಳು ಹಾಗೂ ಮದ್ಯಸಾರವನ್ನು ಯು.ಟಿ.ವೇಣು ಹಾಗೂ ಚಾರಿಮಂಡ ದೇವಯ್ಯ ಎಂಬುವವರು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದಾರೆ ಎಂಬುದಾಗಿ 2000–01ನೇ ಸಾಲಿನ ವಿರಾಜಪೇಟೆ ತಾಲ್ಲೂಕಿನ ಸಾರಾಯಿ ಗುತ್ತಿಗೆದಾರ ನೌಕರ ಕೆ.ಆರ್.ಸಂಪತ್ ರವರು ಶ್ರೀಮಂಗಲ ಠಾಣೆಯ ಆರಕ್ಷಕ ಉಪ ನಿರೀಕ್ಷಕರಿಗೆ ನೀಡಿದ ದೂರಿನ ಅನ್ವಯ ಸದರಿಯವರು ಜೀಪನ್ನು ಪರಿಶೀಲಿಸಿದಾಗ ಪ್ಲಾಸ್ಟಿಕ್ ಚೀಲಗಳಲ್ಲಿದ್ದ ಸಾರಾಯಿ ಪ್ಯಾಕೇಟುಗಳನ್ನು ಎಣಿಸಿ ನೋಡಿದಾಗ ಒಟ್ಟು 1804*100ಮಿಲಿಯ ಸಾರಾಯಿ ಪ್ಯಾಕೇಟುಗಳು ಹಾಗೂ 35ಲೀ. ಸಾಮರ್ಥ್ಯದ ಎರಡು ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಒಟ್ಟು 60ಲೀ. ಮದ್ಯಸಾರವಿರುವುದನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಮೇಲ್ಕಂಡಂತೆ 1ನೇ ಆರೋಪಿ ಯು.ಟಿ.ವೇಣು ಬಿನ್ ತಮ್ಮಯ್ಯ, ಗೋಣಿಕೊಪ್ಪ ಹಾಗೂ 2ನೇ ಆರೋಪಿ ಚಾರಿಮಂಡ ದೇವಯ್ಯ ಬಿನ್ ಬಿದ್ದಪ್ಪ, ನಾಲೂರು ಗ್ರಾಮ, ಬಾಳೆಲೆ ಇವರುಗಳ ಮೇಲೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 34, 43ರ ಪ್ರಕಾರ

ಮೊಕದ್ದಮೆ ಸಂ:76/2000–01, ದಿ:9–9–2000ರಂತೆ ಪ್ರಕರಣ ದಾಖಲು ಮಾಡಿರುತ್ತಾರೆ ಹಾಗೂ ಸದರಿ ಪ್ರಕರಣದಲ್ಲಿನ ಸ್ವೊತ್ತುಗಳು ಮತ್ತು ಕಡತವನ್ನು ಪೊನ್ನಂಪೇಟೆ ಉಪ ವಲಯ ಅಬಕಾರಿ ಉಪ ನಿರೀಕ್ಷಕರಿಗೆ ಹಸ್ತಾಂತರಿಸಿರುತ್ತಾರೆ.

ದಿ:11–9–2000ರಂದು ವಾಹನದ ಮಾಲೀಕರ ಪರವಾಗಿ ವಕೀಲರು ವಕಾಲತ್‌ನೊಂದಿಗೆ ಅರ್ಜಿಯನ್ನು ಸಲ್ಲಿಸಿ ಶ್ರೀ ಕೆ.ಟಿ.ವೆಂಕಟೇಶ್ ಇವರು ವಾಹನ ಜೀಪ್ ಸಂ:ಕೆಎ–12–ಎಂ–572ರ ಅಧಿಕೃತ ಮಾಲೀಕರಾಗಿದ್ದು, ಸದರಿ ಜೀಪನ್ನು ಬಾಡಿಗೆಗೆ ಒದಗಿಸಲಾಗುತ್ತಿದ್ದು, ದಿ:9–9–2000ರಂದು ಸದರಿ ಜೀಪನ್ನು ಕುಟ್ಟ ಕಡೆಯಿಂದ ಗೋಣಿಕೊಪ್ಪ ಕಡೆಗೆ ಬರುತ್ತಿದ್ದಾಗ ವಿರಾಜಪೇಟೆ ತಾಲ್ಲೂಕು ಸಾರಾಯಿ ಗುತ್ತಿಗೆದಾರರ ಕಡೆಯ ಕೆಲವರು ಕುಮಟೂರು ಗ್ರಾಮದ ಹೇರ್ಮಾಡು ಎಂಬಲ್ಲಿ ಸದರಿ ಜೀಪನ್ನು ತಡೆದು ನಿಲ್ಲಿಸಿ ನಂತರ ಬಲತ್ಕಾರವಾಗಿ ಪ್ಲಾಸ್ಟಿಕ್ ಚೀಲಗಳಲ್ಲಿ ಸಾರಾಯಿ ಪ್ಯಾಕೇಟುಗಳನ್ನು ತುಂಬಿಸಿ ಜೀಪಿನಲ್ಲಿರಿಸಿ ಶ್ರೀಮಂಗಲ ಆರಕ್ಷಕ ಠಾಣೆಯ ಉಪ ನಿರೀಕ್ಷಕರಿಂದ ಅಕ್ರಮ ಸಾರಾಯಿ ಪ್ಯಾಕೇಟುಗಳ ಸಾಗಾಣಿಕೆಯ ಮೇಲೆ ಮೊಕದ್ದಮೆ ದಾಖಲು ಮಾಡಿರುತ್ತಾರೆ. ಇದರ ಬಗ್ಗೆ ಮೇಲ್ಕಂಡ ಸಾರಾಯಿ ಗುತ್ತಿಗೆದಾರರ ಕಡೆಯ ಮೇಲೆ ಕ್ರಿಮಿನಲ್ ಮೊಕದ್ದಮೆಯನ್ನು ಹೂಡಲಾಗಿರುತ್ತದೆ. ಸದರಿ ವಾಹನವನ್ನು ಆಧಾರವಾಗಿಟ್ಟುಕೊಂಡು ಮದ್ರಾಸ್ ಫೈನಾನ್ಸ್‌ನಿಂದ ರೂ.40,000/–ಗಳ ಸಾಲ ಪಡೆಯಲಾಗಿರುತ್ತದೆ. ಸದರಿ ವಾಹನದ ಬಾಡಿಗೆಯಿಂದಲೇ ಮೇಲಿನ ಸಾಲ ಮತ್ತು ಬಡ್ಡಿಯನ್ನು ಕಟ್ಟಬೇಕಾಗಿರುತ್ತದೆ. ಸದರಿ ವಾಹನವನ್ನು ಇದೀಗ ತಮ್ಮ ಚಾಲನೆಯಿಲ್ಲದೆ ನಿಲ್ಲಿಸಿರುವುದರಿಂದ ವಾಹನದ ಇಂಜಿನ್ ಮತ್ತು ಇತರ ಭಾಗಗಳು ಹಾಳಾಗಿ ನಷ್ಟ ಉಂಟಾಗುತ್ತದೆ. ಆದುದರಿಂದ ಸದರಿ ವಾಹನವನ್ನು ಮಧ್ಯಂತರಿಕವಾಗಿ ಬಿಡುಗಡೆಗೊಳಿಸಿಕೊಡಬೇಕೆಂದು ಹಾಗೂ ಈ ಬಗ್ಗೆ ಪ್ರಾಧಿಕಾರವು ವಿಧಿಸುವ ಷರತ್ತುಗಳಿಗೆ ಬದ್ಧರಾಗಿರುವುದಾಗಿ ಒಪ್ಪಿ ಅರ್ಜಿಯಲ್ಲಿ ವಿವರಿಸಿರುತ್ತಾರೆ. ವಾಹನದ ಮಾಲೀಕರಾದ ಕೆ.ಟಿ.ವೆಂಕಟೇಶ್ ಇವರು ಈ ಪ್ರಾಧಿಕಾರದ ಮುಂದೆ ಸಲ್ಲಿಸಿದ ಅರ್ಜಿಯ ಬಗ್ಗೆ ಪರಿಶೀಲಿಸಿದಾಗ ಅರ್ಜಿದಾರರು ಅರ್ಜಿಯಲ್ಲಿ ಕೋರಿರುವಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಜೀಪ್ ಸಂ:ಕೆಎ–12–ಎಂ–572ರ ಅಂತಿಮ ಆದೇಶ ಆಗುವವರೆಗೆ ವಾಹನವನ್ನು ಈ ಕಛೇರಿಯ ತೆರೆದ ಪ್ರದೇಶದಲ್ಲಿ ನಿಲ್ಲಿಸಿರುವುದರಿಂದ ಅದರ ಯಂತ್ರ ಹಾಗೂ ಇತರ ಭಾಗಗಳು ತುಕ್ಕು ಹಿಡಿದು ಯೋಗ್ಯವಿಲ್ಲದಂತೆ ಆಗುವುದರಿಂದ ಹಾಗೂ ಸದರಿ ವಾಹನವು ಅದರ ಮೌಲ್ಯವನ್ನು ಕಳೆದುಕೊಳ್ಳುವುದಲ್ಲದೇ ಸೂಕ್ತ ಸ್ಥಳಾವಕಾಶ ಇಲ್ಲದೇ ಇರುವುದರಿಂದ ಸದರಿ ವಾಹನವನ್ನು ಮಧ್ಯಂತರಿಕವಾಗಿ ಬಿಡುಗಡೆಗೊಳಿಸುವುದು ಸೂಕ್ತವೆಂದು ಕಂಡುಬಂದ ಕಾರಣ ಸದರಿ ವಾಹನಕ್ಕೆ ಅಂದಿನ ಮಾರ್ಕೆಟ್ ಮೌಲ್ಯವನ್ನು ನಿಗಧಿಪಡಿಸಲು ದಿ:10–11–2000ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಮುಖೇನ ಕೋರಿದಾಗ ಸದರಿ ಮೋಟಾರು ವಾಹನದ ನಿರೀಕ್ಷಕರು ವಾಹನವನ್ನು ಪರಿಶೀಲಿಸಿ ವಾಹನಕ್ಕೆ ಬೆಲೆ ರೂ.32,000/– (ಮೂವತ್ತೆರಡು ಸಾವಿರ)ಗಳ ಬೆಲೆಯನ್ನು ನಿಗಧಿಪಡಿಸಿ ಮೌಲ್ಯ ದೃಢೀಕರಣ ಪತ್ರವನ್ನು ದಿ:13–11–2000ರಂದು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಈ ಪ್ರಾಧಿಕಾರದಲ್ಲಿ ಸದರಿ ಮೌಲ್ಯವನ್ನು ರೂ.45,000/–(ನಲವತ್ತೈದು ಸಾವಿರ)ಗಳಿಗೆ ನಿಗಧಿಪಡಿಸಿ ಸದರಿ ಮೌಲ್ಯಕ್ಕೆ ಸಮನಾದ ಬ್ಯಾಂಕ್ ಗ್ಯಾರೆಂಟಿಯನ್ನು ಪಡೆದುಕೊಂಡು ಹಾಗೂ ಒಬ್ಬ ಸ್ಥಳೀಯ ಶ್ಯೂರಿಟಿಯನ್ನು ಪಡೆದು ಷರತ್ತುಬದ್ಧವಾಗಿ ದಿ:29–11–2000ದಂದು ವಾಹನ ಸಂ:ಕೆಎ–12–ಎಂ–572ರನ್ನು ಮಧ್ಯಂತರಿಕವಾಗಿ ಬಿಡುಗಡೆಗೊಳಿಸಲಾಗಿರುತ್ತದೆ.

ತದನಂತರ ದಿ:13–12–2000, 14–1–2001, 31–1–2001, 7–3–01, 2–2–01, 16–3–2002, 20–4–02, 1–2–07, 15–2–07, 22–2–07, 20–12–08, 25–6–11, 22–8–11, 12–9–11, 21–11–11, 28–11–11, 19–12–11, 27–2–12ರಂದು ವಿಚಾರಣೆಯನ್ನು ನಡೆಸಲಾಗಿ ದಿ:13–12–2000, 14–1–2001, 7–3–2001, 16–3–02, 22–2–07, 20–12–08, 25–6–11, 22–8–11, 21–11–11, 28–11–11, 27–2–12 ಗಳಲ್ಲಿ ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ. 31–1–01, 2–2–01, 20–4–02, 1–2–07, 15–2–07, 12–9–11, 19–12–11ಗಳಲ್ಲಿ ವಾಹನದ ಮಾಲೀಕರು ಅವರ ಪರ ವಕೀಲರೊಂದಿಗೆ ಹಾಜರಾಗಿರುತ್ತಾರೆ ಹಾಗೂ 12–9–11, 19–12–11ಗಳಲ್ಲಿ ವಾಹನವನ್ನು ಹಾಜರುಪಡಿಸಿರುತ್ತಾರೆ. 22–2–07, 20–12–08, 12–9–11ಗಳಲ್ಲಿ ವಾಹನದ ಮಾಲೀಕರು ಮಾತ್ರ ಹಾಜರಿದ್ದು, ಅವರ ಪರ ವಕೀಲರು ಹಾಜರಾಗಿರುವುದಿಲ್ಲ.

ದಿ:16–3–2002ರಂದು ಪ್ರಕರಣ ದಾಖಲು ಮಾಡಿದ ಅಧಿಕಾರಿಗಳಾದ ಶ್ರೀ ಎಸ್.ಎಂ.ಅಪ್ಪಯ್ಯ, ಆರಕ್ಷಕ ಉಪ ನಿರೀಕ್ಷಕರು, ಶ್ರೀಮಂಗಲ ಠಾಣೆ ಇವರ ವಿಚಾರಣೆಯನ್ನು ಪ್ರಾರಂಭಿಸಲಾಗಿರುತ್ತದೆ.

ಮುಖ್ಯ ವಿಚಾರಣೆ ಎ.ಡಿ.ಪಿ.ಯವರಿಂದ :– 1997ನೇ ಇಸವಿ ಜನವರಿಯಿಂದ 2001ನೇ ಜನವರಿ ವರೆಗೆ ಶ್ರೀಮಂಗಲ ಪೊಲೀಸ್ ಠಾಣೆಯಲ್ಲಿ ಆರಕ್ಷಕ ಉಪ ನಿರೀಕ್ಷಕನಾಗಿ ಕರ್ತವ್ಯ ಮಾಡಿಕೊಂಡಿದ್ದೆ. ದಿ:9–9–2000ದಂದು ಠಾಣೆ ಕರ್ತವ್ಯದಲ್ಲಿದ್ದಾಗ ಸಂಜೆ 6.30ಗಂಟೆಗೆ ಫಿರ್ಯಾದಿ ಶ್ರೀ ಕೆ.ಆರ್.ಸಂಪತ್ ಎಂಬುವವರು ಠಾಣೆಗೆ ಹಾಜರಾಗಿ ಬಂದು ಲಿಖಿತ ದೂರಿನಲ್ಲಿ ಜೀಪ್ ಸಂ:ಕೆಎ–12–ಎಂ–572 ಹಾಗೂ ಅದರಲ್ಲಿ ಇರತಕ್ಕ ಆರು ಗೋಣಿ ಚೀಲದಲ್ಲಿ ಸಾರಾಯಿ ಪ್ಯಾಕೇಟುಗಳು, 2 ಪ್ಲಾಸ್ಟಿಕ್ ಕ್ಯಾನಿನಲ್ಲಿ ಮದ್ಯಸಾರ ಮತ್ತು ಆರೋಪಿ ಇಬ್ಬರನ್ನು ಹಾಜರುಪಡಿಸಿದರು. ಆರೋಪಿಗಳಾದ ಯು.ಟಿ.ವೇಣು ಬಿನ್ ತಮ್ಮಯ್ಯ ಹಾಗೂ ಚಾರಿಮಂಡ ದೇವಯ್ಯ @ ಮೋಹನ್ ಇವರುಗಳನ್ನು ಹಾಜರುಪಡಿಸಿದರು. ಅದನ್ನು ಹೊಂದಿಕೊಂಡು ಠಾಣಾ ಮೊಕದ್ದಮೆ ಸಂ:76/2000 ಕಲಂ34, 43ರ ಅಬಕಾರಿ ಕಾಯ್ದೆ ಮೇರೆ ಮೊಕದ್ದಮೆ ದಾಖಲು ಮಾಡಿಕೊಂಡು ಪ್ರ.ವ.ವರದಿಯನ್ನು ನ್ಯಾಯಾಲಯಕ್ಕೂ ಮೇಲಾಧಿಕಾರಿಗಳಿಗೂ ಸಲ್ಲಿಸಲಾಯಿತು. ನಂತರ ಪಂಚರಾದ ಅಣ್ಣೀರ ರಂಜು, ಮಲ್ಲಂಗಡ ಲಾಲ ಎಂಬುವವರ ಸಮ್ಮುಖದಲ್ಲಿ ಫಿರ್ಯಾದಿ ಸಂಪತ್ತು ರವರು ತೋರಿಸಿಕೊಟ್ಟ ಮೇರೆ ಸದರಿ ಜೀಪನ್ನು ಪರಿಶೀಲಿಸಲಾಯಿತು. ಜೀಪಿನ ಒಳಗಡೆ ಆರು ಪಾಲಿಥಿನ್ ಗೋಣಿ ಚೀಲ ಇದ್ದು, ಅವುಗಳಲ್ಲಿದ್ದ ಸಾರಾಯಿ ಪ್ಯಾಕೇಟುಗಳನ್ನು ಎಣಿಸಲಾಗಿ ಒಂದನೇ ಚೀಲದಲ್ಲಿ 427, ಎರಡನೇ ಚೀಲದಲ್ಲಿ 286, ಮೂರನೇ ಚೀಲದಲ್ಲಿ 278, 4ನೇ ಚೀಲದಲ್ಲಿ 276, 5ನೇ ಚೀಲದಲ್ಲಿ 277, ಆರನೇ ಚೀಲದಲ್ಲಿ 267 ಸಾರಾಯಿ ಪ್ಯಾಕೇಟುಗಳಿದ್ದು, ಅಲ್ಲದೇ ಎರಡು ಬಿಳಿ ಪ್ಲಾಸ್ಟಿಕ್ ಕ್ಯಾನಿನಲ್ಲಿ ತಲಾ 30ಲೀ.ನಂತೆ ಮದ್ಯಸಾರವಿದ್ದುದು ಕಂಡುಬಂತು. ಅವುಗಳನ್ನು ಮಹಜರ್ ಮೂಲಕ ಅಮಾನತುಪಡಿಸಿಕೊಂಡು ಆರು ಚೀಲಗಳಲ್ಲಿದ್ದಂತೆ ಒಂದೊಂದು

ಸಾರಾಯಿ ಪ್ಯಾಕೇಟುಗಳನ್ನು ಮಾದರಿಯಾಗಿ ತೆಗೆದುಕೊಂಡು ಅವುಗಳಿಗೆ ಬಿಳಿ ಬಟ್ಟೆಯಿಂದ ಹೊಲಿದು ಅರಗಿನಿಂದ ಕೆ.ಬಿ.ಎಂಬ ಸೀಲು ಮಾಡಲಾಯಿತು. ಅಲ್ಲದೇ ಎರಡು ಕ್ಯಾನುಗಳಲ್ಲಿದ್ದಂತಹ ಮದ್ಯಸಾರವನ್ನು ಸಹ ಮಾದರಿಗಾಗಿ ಒಂದು ಸೀಸೆಯಲ್ಲಿ 180ಮಿಲಿಯಷ್ಟು ಶೇಖರಿಸಲಾಯಿತು. ಅವುಗಳಿಗೆ ಬಿಳಿ ಬಟ್ಟೆಯಿಂದ ಹೊಲಿದು ಅರಗಿನಿಂದ ಕೆ.ಬಿ.ಎಂಬ ಸೀಲು ಮಾಡಲಾಯಿತು. ನಂತರ ಮೇಲ್ಕಂಡ ಸ್ವೊತ್ತುಗಳನ್ನು ಪೊನ್ನಂಪೇಟೆ ಅಬಕಾರಿ ಇಲಾಖೆಯವರಿಗೆ ವರ್ಗಾಯಿಸಲಾಯಿತು.

ಈಗ ನಾನು ನೋಡುತ್ತಿರುವ ಕಾರ್ಬನ್ ನಕಲು ಫಿರ್ಯಾದಿಯವರು ಆದಿನ ನೀಡಿದ ಫಿರ್ಯಾದಿನ ನಕಲಾಗಿರುತ್ತದೆ. ಅದನ್ನು ನಿಶಾನೆ ಪಿ–1 ಎಂದು ಗುರುತಿಸಲಾಯಿತು. ಮೂಲ ಫಿರ್ಯಾದನ್ನು ಅಪರಾಧ ವಿಚಾರಣೆಯ ಸಂಬಂಧ ವಿರಾಜಪೇಟೆ ಸಿವಿಲ್ ನ್ಯಾಯಾಧೀಶರು ಮತ್ತು ಜೆ.ಎಂ.ಎಫ್.ಸಿ.ನ್ಯಾಯಾಲಯಕ್ಕೆ ಸಲ್ಲಿಸಲಾಗಿದೆ. ಅದರಲ್ಲಿ ಫಿರ್ಯಾದಿ ಹಾಗೂ ನನ್ನ ಸಹಿಗಳು ಇರುತ್ತದೆ. ಅಮಾನತು ಪಡಿಸಿದ ಜೀಪ್, ಮದ್ಯಸಾರ ತುಂಬಿದ ಎರಡು ಪ್ಲಾಸ್ಟಿಕ್ ಕ್ಯಾನುಗಳು, ಆರು ಪ್ಲಾಸ್ಟಿಕ್ ಗೋಣಿಚೀಲಗಳು ಹಾಗೂ ಮಾದರಿ ಸೀಸೆಗಳನ್ನು ಈಗ ನಾನು ನೋಡಿದರೆ ಗುರುತಿಸುತ್ತೇನೆ. ಅಮಾನತುಪಡಿಸಿದ ಪ್ಲಾಸ್ಟಿಕ್ ಕ್ಯಾನುಗಳನ್ನು ಹಾಗೂ ಮಾದರಿ ಸೀಸೆಗಳನ್ನು ವಿರಾಜಪೇಟೆ ನ್ಯಾಯಾಲಯಕ್ಕೆ ಸಲ್ಲಿಸಲಾಗಿದೆ. ಸಾಕ್ಷಿ ಮತ್ತೆ ಹೇಳುತ್ತಾರೆ ಅವುಗಳನ್ನು ಮುಂದಿನ ತನಿಖೆ ಬಗ್ಗೆ ಅಬಕಾರಿ ಇಲಾಖೆಗೆ ಒಪ್ಪಿಸಲಾಗಿದೆ. ಅವರು ಅದನ್ನು ವಿರಾಜಪೇಟೆ ನ್ಯಾಯಾಲಯಕ್ಕೆ ಸಲ್ಲಿಸಿರಬಹುದು. ಅಮಾನತು ಮಹಜರಿನ ನಕಲನ್ನು ಸಹ ನೋಡುತ್ತಿದ್ದು, ಅದನ್ನು ನಿಶಾನೆ ಪಿ2 ಎಂದು ಗುರುತಿಸಲಾಯಿತು. ಅದರ ಮೂಲ ಪ್ರತಿಯನ್ನು ಸಹ ಇತರೇ ಮೂಲ ದಾಖಲಾತಿಗಳೊಡನೆ ಅಂದರೆ ಮಾದರಿ ಸೀಲು ಇತ್ಯಾದಿಗಳನ್ನು ಸಹ ವಿರಾಜಪೇಟೆ ನ್ಯಾಯಾಲಯಕ್ಕೆ ಅಬಕಾರಿ ಇಲಾಖೆಯವರು ರೂಢಿಯಂತೆ ಸಲ್ಲಿಸಿರಬಹುದು.

**ಪಾಟಿ ಸವಾಲು:** ಅರ್ಜಿದಾರರ ಪರ ವಕೀಲರಿಂದ ಪಾಟಿ ಸವಾಲು ನಡೆದಿರುವುದಿಲ್ಲ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಸಾರಾಯಿ ಪ್ಯಾಕೇಟುಗಳನ್ನು ಮತ್ತು ಮದ್ಯಸಾರವನ್ನು ದಿ:4–1–03ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲಾಗಿರುತ್ತದೆ. ತದನಂತರ ವಾಹನದ ಮಾಲೀಕರು ಬ್ಯಾಂಕ್ ಗ್ಯಾರೆಂಟಿ ಅವಧಿಯನ್ನು ವಿಸ್ತರಿಸುತ್ತಾ ಬಂದಿರುತ್ತಾರೆ. ತದನಂತರ ಬ್ಯಾಂಕ್ ಗ್ಯಾರೆಂಟಿ ಹಣ ರೂ.45,000/–(ನಲವತ್ತೈದು ಸಾವಿರ)ಗಳನ್ನು ಇನ್‌ವೋಕ್ ಮಾಡಿಕೊಂಡು ದಿನಾಂಕ: 17–5–2010ರಂದು ರೆವೆನ್ಯೂ ಖಾತೆಯಲ್ಲಿಡಲಾಗಿರುತ್ತದೆ. ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಮಹಜರು ಸ್ವತಂತ್ರ ಸಾಕ್ಷಿದಾರರಾದ ಕೆ.ಆರ್.ಸಂಪತ್ ಬಿನ್ ರಘುನಾಥ್, ಅಣ್ಣೀರ ಎಸ್.ರಾಜು ಬಿನ್ ಸೋಮಯ್ಯ ಇವರುಗಳಿಗೆ ವಿಚಾರಣೆಗೆ ಹಾಜರಾಗಲು ಹಲವಾರು ಬಾರಿ ನೋಟಿಸ್ ನೀಡಲಾಗಿದ್ದರೂ ಸಹ ಹಾಜರಾಗಿರುವುದಿಲ್ಲ.

ವಾಹನದ ಮಾಲೀಕರಿಗೆ ವಿಚಾರಣೆಗಾಗಿ ನೋಟಿಸನ್ನು ನೀಡುತ್ತಿದ್ದರು ಸದರಿ ಪ್ರಕರಣವನ್ನು ವಿಲೇಗೊಳಿಸಲು ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ಸೂಕ್ತ ರೀತಿ ಸಹಕರಿಸದೇ ಅನಾವಶ್ಯಕವಾಗಿ ಕಾಲವಿಳಂಭ ಮಾಡುತ್ತಿರುವುದು ಮತ್ತು ಈ ಪ್ರಕರಣದಲ್ಲಿ ಆಸಕ್ತಿ ತೋರಿಸದೇ ಅಸಹಕಾರವನ್ನು ನೀಡುತ್ತಿದ್ದು, ವಾಹನದ ಮಧ್ಯಂತರ ಬಿಡುಗಡೆ ಸಮಯದಲ್ಲಿ ಈ ನ್ಯಾಯಾಲಯ ವಿಧಿಸಿದ್ದ ಷರತ್ತುಗಳನ್ನು ಕೂಡ ಉಲ್ಲಂಘನೆ ಮಾಡಿರುವ ಕಾರಣದಿಂದ ವಾಹನ ಜೀಪ್ ಸಂ:ಕೆಎ–12–ಎಂ–572ರನ್ನು ಮತ್ತು ಈಗಾಗಲೇ ಆರ್.ಡಿ.ಖಾತೆಯಲ್ಲಿಡಲಾದ ಬ್ಯಾಂಕ್ ಗ್ಯಾರೆಂಟಿ ಹಣ ರೂ.45,000/–(ನಲವತ್ತೈದು ಸಾವಿರ)ಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ.

**ಆದೇಶ ಸಂ:ಇಎಕ್ಸ್ ಇ:ಸಿಆರ್‌ಎಂ:30:2000–01, ದಿ:27–2–2012**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಮೇಲೆ ವಿವರಿಸಲಾದ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರಿಗೆ ಪ್ರಕರಣದ ಬಗ್ಗೆ ಸಂಪೂರ್ಣ ಮಾಹಿತಿಗಳು ತಿಳಿದಿದ್ದು, ಪ್ರಕರಣ ವಿಲೇಗೆ ಅಸಹಕಾರ ನೀಡುತ್ತಿರುವ ಹಿನ್ನಲೆಯನ್ನು ಪರಿಗಣಿಸಿ ಆರಕ್ಷಕ ಉಪ ನಿರೀಕ್ಷಕರು, ಶ್ರೀಮಂಗಲ ಠಾಣೆ ರವರ ಕ್ರೈ.ನಂ:76/2000–01, ದಿ:9–9–2000 ರಲ್ಲಿ ಅಕ್ರಮ ಸಾರಾಯಿ ಪ್ಯಾಕೇಟುಗಳು ಹಾಗೂ ಮದ್ಯಸಾರ ಸಾಗಾಣಿಕೆ ಸಂಬಂಧ ಜಪ್ತುಪಡಿಸಿದ ವಾಹನ ಜೀಪ್ ಸಂ:ಕೆಎ–12–ಎಂ–572ರನ್ನು ಹಾಗೂ ವಾಹನದ ಮಾಲೀಕರು ಭದ್ರತೆಯಾಗಿ ನೀಡಿರುವ ಆರ್.ಡಿ.ಖಾತೆಯಲ್ಲಿಡಲಾದ ಬ್ಯಾಂಕ್ ಗ್ಯಾರೆಂಟಿ ಹಣ ರೂ.45,000/–(ನಲವತ್ತೈದು ಸಾವಿರ)ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿ:27–2–12ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಅಧಿಕೃತ ಅಧಿಕಾರಿಗಳು ಹಾಗೂ**
**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,**
**ಕೊಡಗು ಜಿಲ್ಲೆ, ಮಡಿಕೇರಿ.**

**ಪಿ.ಆರ್. 315**

## PROCEEDINGS OF THE COMMISSIONER OF COMMERCIAL TAXES (KARNATAKA), BANGALORE

**Present:** **Sri Pradeep Singh Kharola, IAS,**
Commissioner of Commercial Taxes.

**Sub:** KVAT Act, 2003 – Section 59(4) – Issue of clarification on rate of tax on spent grains of barley and maize-reg.

**Read:** Letter dated 22.12.2012 of M/s.Cooltech Enterprises, Bangalore

**PREAMBLE:**

M/s.Cooltech Enterprises, No.866, 'Dhairya', 3rd Cross, 7th Main, HAL 2nd Stage, Indiranagar, Bangalore -560 038 is a partnership firm registered under the KVAT Act, 2003. The firm has sought clarification on rate of tax under the KVAT Act on the sale of spent grains of barley and maize.

**2.** In its application, the applicant has explained that spent grains of barley and maize are the residual waste material obtained by breweries in the process of manufacture of beer. In the process of brewing barley malt and maize are subject to the processing of soaking in water, fermentation and extraction of alcohol solution therefrom. Spent grains remain as residual grains after the alcohol solution is extracted from barley malt and maize. The alcohol solution is used for manufacture of beer and spent grains which are waste materials are sold by the breweries. It is the argument of the applicant that since spent grains are sold as animal feed, the commodity falls under Sl. No.5 of the First Schedule to the KVAT Act and hence exempted from tax. Alternatively, spent grains are coarse grains of barley and maize and remain so even after the process of fermentation and extraction of alcohol therefrom. Hence they fall under Sl. No.16 of the First Schedule which relates to coarse grains and exempt from tax. The third view of the applicant is that spent grains may also be considered under Sl. No. 39 of the First Schedule which reads as "organic manure, compost manure, fish manure and poultry manure". According to the applicant, spent grains may be considered as organic manure since it is also used as such. Keeping the above understanding, the applicant has sought clarification on rate of tax on the commodity 'spent grains'.

**3**. Sri M.A.Maniyar, STP, duly authorized by the applicant appeared and he was heard. He re-iterated the facts and arguments made in the application. He produced sample of the goods and filed copies of the following documents:-

(a) Literature from Wikipedia relating to brewing process;

(b) Invoice dated 31.12.2011 issued by M/s.United Breweries Limited, Nelamangala for sale of spent grains;

(c) Invoice dated 26.6.2011 issued by M/s.Mysore Breweries, Bangalore for sale of cattle feed;

(d) Decision in the case of Omrao Industrial Corporation Vs Sales Tax Officer, Kanpur reported in 33 STC 343 (All);

(e) Literature on brewers grains, wet brewers grains, dried brewers grains, brewers spent grain, brewers dried yeast issued by Food and Agriculture Organization of UN;

(f) Decision of Allahabad High Court in the case of Commissioner of Trade Tax, UP, Lucknow Vs National Cereal Products Limited reported in 111 STC 241; and

(g) Decision of Division Bench of Hon'ble High Court of Karnataka in the case of M.N.Nilugal Vs District Manager, FCI reported in 142 STC 229.

**4**. Matter is examined. The arguments, documentary evidences and sample of goods produced are verified. It is seen that the commodity 'spent grain' is a residue obtained in the process of manufacture of beer. The process of manufacture starts with malt barley or maize as basic raw materials. It is subjected to several processes such as steeping, milling, mashing, lautering and boiling. The process basically involves adding of water to barley malt and maize and subjecting it to the process of fermentation for a certain period. During the process of fermentation, the alcohol gets released from the grains which are then separated by filtration and further process is done on alcohol by adding flavor. The residue obtained after separation of alcohol on filtration is called spent grain. Thus, spent grain is malted barley and maize which have been subjected to fermentation.

**5**. The residual commodity spent grain has been sold by the above said two breweries mentioning the commodity as cattle feed. The issue that arises now is whether malted barley and maize remain so even after the process or they become different commercial commodities after the process. This is examined as under.

**6**. Malted barley is held to be barley even after the process of malting, i.e, germination in water, by Allahabad High Court in the case of Commissioner of Trade Tax, UP Vs National cereal Products Limited. Hence, malted barley and maize fall under Sl. No.16 of the First Schedule to the KVAT Act which relates to coarse grains. By subjecting it to the process of fermentation, malted barley and maize have become spent grains. In this process, they have lost the characteristic of being fit for human consumption. But they continue to be fit for consumption as animal feed. By becoming so, malted barley and maize have not lost their characteristics of being cereal or coarse grain.

**7**. In the case of M.N.Nilugal Vs District Manager, Food Corporation of India, damaged wheat and rice were sold by the FCI as fit for cattle / poultry feed but not fit for human consumption. The question arose whether the damaged wheat and rice which were unfit for human consumption but fit for consumption for livestock continue to be cereal. After examining the issues, the Hon'ble High Court of Karnataka held as under:-

> *"………When a food grain is fit for consumption by both human and livestock, there can be no doubt that it is a cereal. Even where on account of decay or damage, a cereal is found to be unfit for human consumption but still fit for consumption by livestock, it will still continue to be a "cereal". If the cereal, on account of its damaged condition is wholly unfit for consumption either by human or by livestock, but is fit to be used only as a manure or at best for production of industrial starch, then it may cease to be considered as "cereal". ……."*

**8**. From the literature issued by Food and Agriculture Organization of U.N, it is seen that the major use of spent grain is as animal food.

**9**. In the present case, it is seen that malted barley and maize though become unfit for human consumption, they are fit for use as animal feed. As seen from the literature on the commodity, the major use of the goods is as animal feed only. Following the decision of Karnataka High Court in the case of M.N.Nilugal Vs District Manager, Food Corporation of India, it is seen that spent grains of barley and maize are nothing but barley and maize which are coarse grains falling under Sl. No.16 of the First Schedule to the KVAT Act, which are exempt from tax. Hence the following:

**ORDER NO.CLR.CR.182/11-12 DATED 12.03.2012**

It is hereby clarified that spent grains of barley and maize obtained as residue in the process of manufacture of beer fall under Sl. No.16 of the First Schedule to the KVAT Act and hence exempted from levy of tax under the KVAT Act.

**PRADEEP SINGH KHAROLA,**
Commissioner of Commercial Taxes
Karnataka, Bangalore.

**P R 396**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಾಇ 40 ಎಲ್‌ಡಬ್ಲ್ಯೂಎ 2012, ದಿನಾಂಕ: 26–03–2012**

ಸರ್ಕಾರದ ಆದೇಶ ಸಂಖ್ಯೆ : ಕಾಇ 40 ಎಲ್‌ಡಬ್ಲ್ಯೂಎ 2011, ದಿನಾಂಕ: 12–01–2012ರಲ್ಲಿ ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ವಾಹನ ಚಾಲಕರ ಅಪಘಾತ ಪರಿಹಾರ ಯೋಜನೆಯನ್ನು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಜಾರಿಗೊಳಿಸಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ. ಸದರಿ ಯೋಜನೆಗೆ ಅರ್ಹ ಫಲಾನುಭವಿಗಳನ್ನು ನೋಂದಣಿ ಮಾಡಿಕೊಳ್ಳಲು ಕಾರ್ಮಿಕ ಅಧಿಕಾರಿಗಳನ್ನು ನೋಂದಣಾಧಿಕಾರಿಗಳನ್ನಾಗಿ ಈ ಮೂಲಕ ನೇಮಿಸಲಾಗಿದೆ ಹಾಗೂ ಯೋಜನೆ ಅನುಷ್ಠಾನಕ್ಕೆ ಸಂಬಂಧಪಟ್ಟ ಇತರೆ ಕೆಲಸಗಳನ್ನು ಸಹ ನಿರ್ವಹಿಸಲು ಅನುಬಂಧದಲ್ಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಅಧಿಕಾರವನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ

ಅನುಬಂಧ

ಕೋಷ್ಟಕ

| ಕ್ರಮ ಸಂಖ್ಯೆ | ಕಾರ್ಮಿಕ ಅಧಿಕಾರಿಗಳ ವಿವರ ಹಾಗು ಅವರ ಕೇಂದ್ರಸ್ಥಾನಗಳು | ಕಾರ್ಯವ್ಯಾಪ್ತಿ |
|---|---|---|
| 1 | ಕಾರ್ಮಿಕ ಅಧಿಕಾರಿ ಉಪವಿಭಾಗ–1 ಬೆಂಗಳೂರು. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ ಸಂಖ್ಯೆ: 10, 14, 16 ರಿಂದ 19, 36 ರಿಂದ 38, 40 ರಿಂದ 45, 64 ರಿಂದ 74, 76, 77, 100 ರಿಂದ 102, 105 ಬೆಂಗಳೂರು ಉತ್ತರ ತಾಲ್ಲೂಕಿನ ಯಶವಂತಪುರ ಹೋಬಳಿಯ ಲಕ್ಷ್ಮೀಪುರ, ಸೋಮಶೆಟ್ಟಿಹಳ್ಳಿ, ಕೆರೆಗುಡ್ಡಹಳ್ಳಿ, ಗಾಣಿಗರಹಳ್ಳಿ, ಚಿಕ್ಕಬಾಣಾವರ, ಗ್ರಾಮ ಪ್ರದೇಶಗಳನ್ನು ಹೊರತುಪಡಿಸಿದ ಯಶವಂತಪುರ ಹೋಬಳಿ, ದಾಸನಪುರ ಹೋಬಳಿ, ತಾವರೆಕೆರೆ ಹೋಬಳಿ ಹಾಗು ನೆಲಮಂಗಲ ತಾಲ್ಲೂಕು. |
| 2 | ಕಾರ್ಮಿಕ ಅಧಿಕಾರಿ ಉಪವಿಭಾಗ–2 ಬೆಂಗಳೂರು. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ ಸಂಖ್ಯೆ 103, 104, 123 ರಿಂದ 137, 141, 155 ರಿಂದ 170, 177 ರಿಂದ 187, 194 ರಿಂದ 198, ಬೆಂಗಳೂರು ದಕ್ಷಿಣ ತಾಲ್ಲೂಕಿನ ಉತ್ತರಹಳ್ಳಿ ಹೋಬಳಿ ಹಾಗು ಕೆಂಗೇರಿ ಹೋಬಳಿಯ ಪ್ರದೇಶಗಳು. |
| 3 | ಕಾರ್ಮಿಕ ಅಧಿಕಾರಿ ಉಪವಿಭಾಗ–3 ಬೆಂಗಳೂರು. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ ಸಂಖ್ಯೆ 1,2, 5 ರಿಂದ 7, 21 ರಿಂದ 33, 47 ರಿಂದ 50, 52 ರಿಂದ 55, 60, 82 ರಿಂದ 86, 113, 149, 150, ಬೆಂಗಳೂರು ಪೂರ್ವ ತಾಲ್ಲೂಕಿನ ವರ್ತೂರು ಹಾಗು ಬಿದರಹಳ್ಳಿ ಹೋಬಳಿಗಳು, ಉತ್ತರ ತಾಲ್ಲೂಕಿನ ಜಾಲ ಹೋಬಳಿ ಪ್ರದೇಶಗಳು ಹಾಗು ದೇವನಹಳ್ಳಿ ತಾಲ್ಲೂಕು. |
| 4 | ಕಾರ್ಮಿಕ ಅಧಿಕಾರಿ ಉಪವಿಭಾಗ–4 ಬೆಂಗಳೂರು. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ ಸಂಖ್ಯೆ 51, 56 ರಿಂದ 59, 78 ರಿಂದ 81, 87 ರಿಂದ 92, 111, 112, 114 ರಿಂದ 117, 148, 151, 172 ರಿಂದ 175. ಹಾಗು ಹೊಸಕೋಟೆ ತಾಲ್ಲೂಕು. |
| 5 | ಕಾರ್ಮಿಕ ಅಧಿಕಾರಿ ಉಪವಿಭಾಗ–5 ಬೆಂಗಳೂರು. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ ಸಂಖ್ಯೆ, 3, 4 8, 9, 11 ರಿಂದ 13, 15, 20, 34, 35, 39, 46, 61 ರಿಂದ 63, 75, 93 ರಿಂದ 99, 106 ರಿಂದ 108, 109 ರಲ್ಲಿ 9ನೇ ವೃತ್ತಕ್ಕೆ ನಿಗದಿಪಡಿಸಿದ ಕಾರ್ಯವ್ಯಾಪ್ತಿಯನ್ನು ಹೊರತುಪಡಿಸಿ ಉಳಿದ ಪ್ರದೇಶಗಳು, 120 ರಿಂದ 122, ಬೆಂಗಳೂರು ಉತ್ತರ ತಾಲ್ಲೂಕಿನ ಯಶವಂತಪುರ ಹೋಬಳಿಯ ಲಕ್ಷ್ಮೀಪುರ, ಸೋಮಶೆಟ್ಟಿಹಳ್ಳಿ, ಕೆರೆಗುಡ್ಡಹಳ್ಳಿ, ಗಾಣಿಗರಹಳ್ಳಿ, ಚಿಕ್ಕಬಾಣಾವರ, ಗ್ರಾಮ ಪ್ರದೇಶಗಳು., ಯಲಹಂಕ ಹೋಬಳಿ, ಹೆಸರಘಟ್ಟ ಹೋಬಳಿ ಹಾಗು ದೊಡ್ಡಬಳ್ಳಾಪುರ ತಾಲ್ಲೂಕು |
| 6 | ಕಾರ್ಮಿಕ ಅಧಿಕಾರಿ ಉಪವಿಭಾಗ–6 ಬೆಂಗಳೂರು. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ ಸಂಖ್ಯೆ 109 ರಲ್ಲಿ, ಅವಿನ್ಯೂ ರಸ್ತೆಯ ಚಿಕ್ಕಪೇಟೆ ಸರ್ಕಲ್ ನಿಂದ ಕೆಂಪೇಗೌಡ ರಸ್ತೆಯವರೆಗೆ, ಕೆಂಪೇಗೌಡ ರಸ್ತೆಯಿಂದ ಬಿ.ವಿ.ಕೆ.ರಸ್ತೆಯ ಮಹಾರಾಜಾ ಕಾಂಪ್ಲೆಕ್ಸ್ ವರೆಗೆ, ಬಿ.ವಿ.ಕೆ.ರಸ್ತೆಯಿಂದ ರಂಗಸ್ವಾಮಿಗುಡಿ ರಸ್ತೆಯವರೆಗೆ, ರಂಗಸ್ವಾಮಿಗುಡಿ ರಸ್ತೆಯಿಂದ ಬಳೇಪೇಟೆ ಮುಖ್ಯರಸ್ತೆಯ ಜೆ.ಎಂ.ಲೇನ್ 3ನೇ ಅಡ್ಡರಸ್ತೆಯ ಮೂಲಕ ಓ.ಟಿ.ಸಿ.ರಸ್ತೆಯಲ್ಲಿ ಮುಂದುವರೆದು ಭಾಷ್ಯಂ ರಸ್ತೆಯವರೆಗೆ, ಭಾಷ್ಯಂ ರಸ್ತೆಯಿಂದ ಸುಲ್ತಾನ್ ಪೇಟೆ ಮುಖ್ಯರಸ್ತೆಯವರೆಗೆ, ಸುಲ್ತಾನ್ ಪೇಟೆ ಮುಖ್ಯರಸ್ತೆಯಿಂದ ಎ.ಎಸ್.ಚಾರ್ ಸ್ಟ್ರೀಟ್ ನಲ್ಲಿ ಮುಂದುವರೆದು ಬಿ.ವಿ.ಕೆ. ಅಯ್ಯಂಗಾರ್ ರಸ್ತೆಯ ವೃತ್ತದವರೆಗೆ, ಬಿ.ವಿ.ಕೆ. ಅಯ್ಯಂಗಾರ್ ರಸ್ತೆಯ ವೃತ್ತದಿಂದ ಓ. ಟಿ.ಸಿ.ರಸ್ತೆಯಲ್ಲಿ ಮುಂದುವರೆದು ಅವಿನ್ಯೂ ರಸ್ತೆಯ ಚಿಕ್ಕಪೇಟೆ ವೃತ್ತದವರೆಗೆ ಮತ್ತು ವಾರ್ಡ ಸಂಖ್ಯೆ 110, 118, 119, 138 ರಿಂದ 140, 142 ರಿಂದ 147, 152 ರಿಂದ 154, 171, 176, 188 ರಿಂದ 193, ಬೆಂಗಳೂರು ದಕ್ಷಿಣ ತಾಲ್ಲೂಕಿನ ಬೇಗೂರು ಹೋಬಳಿ ಪ್ರದೇಶಗಳು, ಆನೇಕಲ್ ತಾಲ್ಲೂಕು. |

| ಕ್ರಮ ಸಂಖ್ಯೆ | ಕಾರ್ಮಿಕ ಅಧಿಕಾರಿಗಳ ವಿವರ ಹಾಗು ಅವರ ಕೇಂದ್ರಸ್ಥಾನಗಳು | ಕಾರ್ಯವ್ಯಾಪ್ತಿ |
|---|---|---|
| 7 | ಕಾರ್ಮಿಕ ಅಧಿಕಾರಿ, ತುಮಕೂರು ಉಪ ವಿಭಾಗ, ತುಮಕೂರು. | ತುಮಕೂರು ಜಿಲ್ಲೆ |
| 8 | ಕಾರ್ಮಿಕ ಅಧಿಕಾರಿ, ಮೈಸೂರು ಉಪ ವಿಭಾಗ, ಮೈಸೂರು. | ಮೈಸೂರು ಜಿಲ್ಲೆ. |
| 9 | ಕಾರ್ಮಿಕ ಅಧಿಕಾರಿ, ಮಂಡ್ಯ ಉಪ ವಿಭಾಗ-1, ಮಂಡ್ಯ | ಮಂಡ್ಯ ನಗರಸಭೆ ವಾರ್ಡ್ ಸಂಖ್ಯೆ: 3 ರಿಂದ 18, 22, 23, 25, 26, 27, ಮತ್ತು ಬಸರಾಳು, ಕೆರಗೋಡು, ಕಸಬ ಹೋಬಳಿಗಳು ಹಾಗೂ ಮಳವಳ್ಳಿ, ಪಾಂಡವಪುರ ಮತ್ತು ಶ್ರೀರಂಗಪಟ್ಟಣ ತಾಲ್ಲೂಕುಗಳು. |
| 10 | ಕಾರ್ಮಿಕ ಅಧಿಕಾರಿ, ಮಂಡ್ಯ ಉಪ ವಿಭಾಗ-2, ಮಂಡ್ಯ | ಮಂಡ್ಯ ನಗರಸಭೆ ವಾರ್ಡ್ ಸಂಖ್ಯೆ: 1, 2, 19, 20, 21, 24, 28 ರಿಂದ 35 ಮತ್ತು ಕೊತ್ತತಿ ಮತ್ತು ದುದ್ದ ಹೋಬಳಿಗಳು ಹಾಗೂ ಮದ್ದೂರು, ಕೆ.ಆರ್. ಪೇಟೆ ಮತ್ತು ನಾಗಮಂಗಲ ತಾಲ್ಲೂಕುಗಳು. |
| 11 | ಕಾರ್ಮಿಕ ಅಧಿಕಾರಿ, ಕೋಲಾರ ಉಪ ವಿಭಾಗ ಕೋಲಾರ. | ಕೋಲಾರ ಜಿಲ್ಲೆ. |
| 12 | ಕಾರ್ಮಿಕ ಅಧಿಕಾರಿ, ಚಾಮರಾಜನಗರ ಉಪ ವಿಭಾಗ, ಚಾಮರಾಜನಗರ. | ಚಾಮರಾಜನಗರ ಜಿಲ್ಲೆ. |
| 13 | ಕಾರ್ಮಿಕ ಅಧಿಕಾರಿ, ಗುಲ್ಬರ್ಗ ಉಪವಿಭಾಗ, ಗುಲ್ಬರ್ಗ. | ಗುಲ್ಬರ್ಗ ಜಿಲ್ಲೆ. |
| 14 | ಕಾರ್ಮಿಕ ಅಧಿಕಾರಿ, ಬಳ್ಳಾರಿ ಉಪ ವಿಭಾಗ-1, ಬಳ್ಳಾರಿ. | ಬಳ್ಳಾರಿನಗರ ಮುನ್ಸಿಪಲ್ ಡಿವಿಜನ್ ವಾರ್ಡ್ ನಂ: 7 ರಿಂದ 18 ಮತ್ತು (ಉಳಿದ ನಗರ ಮುನ್ಸಿಪಲ್ ಪ್ರದೇಶ ಹೊರತುಪಡಿಸಿ) ಬಳ್ಳಾರಿ ತಾಲ್ಲೂಕಿನ ಪ್ರದೇಶ ಅನಂತಪುರ ರಸ್ತೆ ಮತ್ತು ಮೋಕಾ ಹೋಬಳಿ, ಹೊಸಪೇಟೆ ಮತ್ತು ಸಿರಗುಪ್ಪ ತಾಲ್ಲೂಕುಗಳು. |
| 15 | ಕಾರ್ಮಿಕ ಅಧಿಕಾರಿ, ಬಳ್ಳಾರಿ ಉಪ ವಿಭಾಗ-1, ಬಳ್ಳಾರಿ. | ಬಳ್ಳಾರಿನಗರ ಮುನ್ಸಿಪಲ್ ಡಿವಿಜನ್ ವಾರ್ಡ್ ನಂ: 1 ರಿಂದ 6 ಮತ್ತು 19 ರಿಂದ 30, ಅಲೀಪುರ ರಸ್ತೆ, ಕುಡಿತಿನಿ ಗ್ರಾಮ ಹಾಗು ಕುರುಗೋಡು ಗ್ರಾಮ, ಮತ್ತು ಹಗರಿ ಬೊಮ್ಮನಹಳ್ಳಿ, ಸಂಡೂರು, ಹೋವಿನ ಹಡಗಲಿ, ಮತ್ತು ಕೂಡ್ಲಗಿ ತಾಲ್ಲೂಕುಗಳು. |
| 16 | ಕಾರ್ಮಿಕ ಅಧಿಕಾರಿ, ಕೊಪ್ಪಳ ಉಪ ವಿಭಾಗ, ಕೊಪ್ಪಳ. | ಕೊಪ್ಪಳ ಜಿಲ್ಲೆ. |
| 17 | ಕಾರ್ಮಿಕ ಅಧಿಕಾರಿ, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ. | ಚಿತ್ರದುರ್ಗ ಜಿಲ್ಲೆ. |
| 18 | ಕಾರ್ಮಿಕ ಅಧಿಕಾರಿ, ದಾವಣಗೆರೆ ಉಪ ವಿಭಾಗ, ದಾವಣಗೆರೆ. | ದಾವಣಗೆರೆ ಜಿಲ್ಲೆ. |
| 19 | ಕಾರ್ಮಿಕ ಅಧಿಕಾರಿ, ರಾಯಚೂರು ಉಪ ವಿಭಾಗ ರಾಯಚೂರು. | ರಾಯಚೂರು ಜಿಲ್ಲೆ |
| 20 | ಕಾರ್ಮಿಕ ಅಧಿಕಾರಿ, ಬೀದರ್ ಉಪ ವಿಭಾಗ, ಬೀದರ್ | ಬೀದರ್ ಜಿಲ್ಲೆ |
| 21 | ಕಾರ್ಮಿಕ ಅಧಿಕಾರಿ, ಬೆಳಗಾವಿ ಉಪವಿಭಾಗ-1, ಬೆಳಗಾವಿ. | ಬೆಳಗಾವಿ ನಗರ ಪಾಲಿಕೆಯ ಡಿವಿಜನ್ ಸಂಖ್ಯೆ 24 ರಿಂದ 44 ಮತ್ತು ಗೋಕಾಕ್, ಚಿಕ್ಕೋಡಿ, ಹುಕ್ಕೇರಿ, ಅಥಣಿ ಹಾಗೂ ರಾಯಬಾಗ್ ತಾಲ್ಲೂಕುಗಳು. |
| 22 | ಕಾರ್ಮಿಕ ಅಧಿಕಾರಿ, ಬೆಳಗಾವಿ ಉಪವಿಭಾಗ-2, ಬೆಳಗಾವಿ. | ಬೆಳಗಾವಿ ನಗರ ಪಾಲಿಕೆಯ ಡಿವಿಜನ್ ಸಂಖ್ಯೆ 1 ರಿಂದ 23 ಹಾಗೂ 45 ರಿಂಧ ಮತ್ತು 51ರವರೆಗೆ ಮತ್ತು ಬೆಳಗಾವಿ ತಾಲ್ಲೂಕು ಹಾಗೂ ರಾಮದುರ್ಗ, ಸವದತ್ತಿ, ಖಾನಾಪುರ, ಬೈಲಹೊಂಗಲ ತಾಲ್ಲೂಕುಗಳು. |
| 23 | ಕಾರ್ಮಿಕ ಅಧಿಕಾರಿ, ವಿಜಾಪುರ ಉಪ ವಿಭಾಗ-1, ವಿಜಾಪುರ | ಬಿಜಾಪುರ ಮುನ್ಸಿಪಲ್ ಡಿವಿಜನ್ ವಾರ್ಡ್ ನಂ.2, 3, 4, 6 ಮತ್ತು 8 ಹಾಗೂ ಸಿಂದಗಿ ಮತ್ತು ಇಂಡಿ ತಾಲ್ಲೂಕುಗಳು. |

| ಕ್ರಮ ಸಂಖ್ಯೆ | ಕಾರ್ಮಿಕ ಅಧಿಕಾರಿಗಳ ವಿವರ ಹಾಗು ಅವರ ಕೇಂದ್ರಸ್ಥಾನಗಳು | ಕಾರ್ಯವ್ಯಾಪ್ತಿ |
|---|---|---|
| 24 | ಕಾರ್ಮಿಕ ಅಧಿಕಾರಿ, ವಿಜಾಪುರ ಉಪ ವಿಭಾಗ-2, ವಿಜಾಪುರ | ಬಿಜಾಪುರ ಮುನ್ಸಿಪಲ್ ಡಿವಿಜನ್ ವಾರ್ಡ್ ನಂ.1, 5, 7, 9 ಮತ್ತು 10 ಹಾಗೂ ಬಿಜಾಪುರ ತಾಲ್ಲೂಕಿನ ಉಳಿದ ಪ್ರದೇಶ ಮತ್ತು ಮುದ್ದೇಬಿಹಾಳ ಹಾಗೂ ಬಸವನ ಬಾಗೇವಾಡಿ ತಾಲ್ಲೂಕುಗಳು. |
| 25 | ಕಾರ್ಮಿಕ ಅಧಿಕಾರಿ, ಹುಬ್ಬಳ್ಳಿ ಉಪ ವಿಭಾಗ-1, ಹುಬ್ಬಳ್ಳಿ. | ಹುಬ್ಬಳ್ಳಿ ಧಾರವಾಡ ನಗರ ಪಾಲಿಕೆಯ ಡಿವಿಜನ್ ಸಂಖ್ಯೆ: 22 ರಿಂದ 31, 37 ರಿಂದ 42, 45, 46, 50, 53 ಮತ್ತು ಹುಬ್ಬಳ್ಳಿಯ ಅಗಸೆಯಿಂದ ಪ್ರಾರಂಭಿಸಿ ಶಿವಾಜಿ ರಸ್ತೆ, ಗಾಂಧಿ ಚೌಕ, ಸುಭಾಸ್ ರಸ್ತೆ, ಆಜಾದ್ ಪಾರ್ಕ ರಸ್ತೆ, ಸಪ್ತಾಪುರ ರಸ್ತೆ, ಯೂನಿವರ್ಸಿಟಿ ರಸ್ತೆ ಮಾರ್ಗವಾಗಿ ಹಳಿಯಾಳ ರಸ್ತೆಯನ್ನು ಸೇರುವ ಹುಬ್ಬಳ್ಳಿ,ಧಾರವಾಡ ನಗರ ಪಾಲಿಕೆಯ ಎಲ್ಲೆಯನ್ನು ಮುಟ್ಟುವವರೆಗೆ ಇರುವ ವಿಭಾಗ ಮಾಡುವ ರಸ್ತೆಯ ಉತ್ತರಕ್ಕೆ ಇರುವ ಎಲ್ಲಾ ಪ್ರದೇಶಗಳು ಮತ್ತು ಧಾರವಾಡ ತಾಲ್ಲೂಕು ಹಾಗು ಕುಂದಗೋಳ ತಾಲ್ಲೂಕುಗಳು. |
| 26 | ಕಾರ್ಮಿಕ ಅಧಿಕಾರಿ, ಹುಬ್ಬಳ್ಳಿ ಉಪ ವಿಭಾಗ-2, ಹುಬ್ಬಳ್ಳಿ. | ಹುಬ್ಬಳ್ಳಿ ಧಾರವಾಡ ನಗರ ಪಾಲಿಕೆಯ ಡಿವಿಜನ್ ಸಂಖ್ಯೆ: 19 ರಿಂದ 21, 32 ರಿಂದ 36, 43, 44, 47 ರಿಂದ 49, 51, 52, 54 ರಿಂದ 57 ಮತ್ತು ಹುಬ್ಬಳ್ಳಿಯ ಅಗಸೆಯಿಂದ ಪ್ರಾರಂಭಿಸಿ, ಶಿವಾಜಿ ರಸ್ತೆ, ಗಾಂಧಿ ಚೌಕ, ಸುಭಾಸ್ ರಸ್ತೆ, ಆಜಾದ್ ಪಾರ್ಕ ರಸ್ತೆ, ಕರ್ನಾಟಕ ಕಾಲೇಜು ರಸ್ತೆ, ಸಪ್ತಾಪುರ ರಸ್ತೆ, ಯೂನಿವರ್ಸಿಟಿ ಮಾರ್ಗವಾಗಿ ಹಳಿಯಾಳ ರಸ್ತೆಯನ್ನು ಸೇರುವ ಹುಬ್ಬಳ್ಳಿ ಧಾರವಾಡ ನಗರ ಪಾಲಿಕೆಯ ಎಲ್ಲೆಯನ್ನು ಮುಟ್ಟುವವರೆಗೆ ಇರುವ ವಿಭಾಗ ಮಾಡುವ ರಸ್ತೆಯ ದಕ್ಷಿಣಕ್ಕೆ ಇರುವ ಪ್ರದೇಶಗಳು, ಮತ್ತು ನವಲಗುಂದ ಹಾಗೂ ಕಲಘಟಗಿ ತಾಲ್ಲೂಕುಗಳು. |
| 27 | ಕಾರ್ಮಿಕ ಅಧಿಕಾರಿ, ಬಾಗಲಕೋಟೆ ಉಪ ವಿಭಾಗ, ಬಾಗಲಕೋಟೆ. | ಬಾಗಲಕೋಟೆ ಜಿಲ್ಲೆ. |
| 28 | ಕಾರ್ಮಿಕ ಅಧಿಕಾರಿ, ಗದಗ ಉಪ ವಿಭಾಗ, ಗದಗ, | ಗದಗ ಜಿಲ್ಲೆ. |
| 29 | ಕಾರ್ಮಿಕ ಅಧಿಕಾರಿ, ಹಾವೇರಿ ಉಪ ವಿಭಾಗ, ಹಾವೇರಿ. | ಹಾವೇರಿ ಜಿಲ್ಲೆ. |
| 30 | ಕಾರ್ಮಿಕ ಅಧಿಕಾರಿ, ಕಾರವಾರ ಉಪ ವಿಭಾಗ, ಕಾರವಾರ | ಕಾರವಾರ ಜಿಲ್ಲೆ |
| 31 | ಕಾರ್ಮಿಕ ಅಧಿಕಾರಿ, ಹಾಸನ ಉಪ ವಿಭಾಗ, ಹಾಸನ. | ಹಾಸನ ಜಿಲ್ಲೆ. |
| 32 | ಕಾರ್ಮಿಕ ಅಧಿಕಾರಿ, ಕೊಡಗು ಉಪ ವಿಭಾಗ, ಮಡಿಕೇರಿ. | ಮಡಿಕೇರಿ ಜಿಲ್ಲೆ. |
| 33 | ಕಾರ್ಮಿಕ ಅಧಿಕಾರಿ, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ. | ಶಿವಮೊಗ್ಗ ಜಿಲ್ಲೆ. |
| 34 | ಕಾರ್ಮಿಕ ಅಧಿಕಾರಿ, ಉಡುಪಿ ಉಪ ವಿಭಾಗ, ಉಡುಪಿ. | ಉಡುಪಿ ಜಿಲ್ಲೆ |
| 35 | ಕಾರ್ಮಿಕ ಅಧಿಕಾರಿ, ಚಿಕ್ಕಮಗಳೂರು ಉಪ ವಿಭಾಗ-1, ಚಿಕ್ಕಮಗಳೂರು. | ಚಿಕ್ಕಮಗಳೂರು ನಗರದ ಮುನ್ಸಿಪಲ್ ಡಿವಿಜನ್ ಸಂಖ್ಯೆ: 1 ರಿಂದ 3 ಮತ್ತು ಚಿಕ್ಕಮಗಳೂರು ತಾಲ್ಲೂಕಿನ ವಸ್ತಾರೆ, ಆಲ್ದೂರು, ಕಾಂಡ್ಯ ಮತ್ತು ಅಂಬಳೆ ಹೋಬಳಿಗಳು ಹಾಗೂ ಕೊಪ್ಪ, ಶೃಂಗೇರಿ, ನರಸಿಂಹರಾಜಪುರ ಮತ್ತು ತರೀಕೆರೆ ತಾಲ್ಲೂಕುಗಳು. |
| 36 | ಕಾರ್ಮಿಕ ಅಧಿಕಾರಿ, ಚಿಕ್ಕಮಗಳೂರು ಉಪ ವಿಭಾಗ-2 ಚಿಕ್ಕಮಗಳೂರು. | ಚಿಕ್ಕಮಗಳೂರು ನಗರದ ಮುನ್ಸಿಪಲ್ ಡಿವಿಜನ್ ಸಂಖ್ಯೆ: 4 ರಿಂದ 7 ಮತ್ತು ಚಿಕ್ಕಮಗಳೂರು ತಾಲ್ಲೂಕಿನ ಕಸಬಾ, ಲಕ್ಯ, ಆವತಿ ಮತ್ತು ಜಾಗರ ಹೋಬಳಿಗಳು ಹಾಗೂ ಮೂಡಿಗೆರೆ ಮತ್ತು ಕಡೂರು ತಾಲ್ಲೂಕುಗಳು. |
| 37 | ಕಾರ್ಮಿಕ ಅಧಿಕಾರಿ, ದಕ್ಷಿಣ ಕನ್ನಡ ಉಪ ವಿಭಾಗ-1, ಮಂಗಳೂರು. | ಮಂಗಳೂರು ನಗರ ಪಾಲಿಕೆಯ ವಾರ್ಡ್ ಸಂಖ್ಯೆ: 14 ರಿಂದ 17, 22 ರಿಂದ 25 ಹಾಗೂ ಮಂಗಳೂರು ತಾಲ್ಲೂಕಿನ ಎಲ್ಲಾ ಪ್ರದೇಶಗಳು ಮತ್ತು ಬೆಳ್ತಂಗಡಿ ತಾಲ್ಲೂಕು. |
| 38 | ಕಾರ್ಮಿಕ ಅಧಿಕಾರಿ, ದಕ್ಷಿಣ ಕನ್ನಡ ಉಪ ವಿಭಾಗ-2, ಮಂಗಳೂರು. | ಮಂಗಳೂರು ನಗರ ಪಾಲಿಕೆಯ ವಾರ್ಡ್ ಸಂಖ್ಯೆ: 1 ರಿಂದ 13 ಮತ್ತು 18 ರಿಂದ 21, ಬಂಟ್ವಾಳ, ಪುತ್ತೂರು ಮತ್ತು ಸುಳ್ಯ ತಾಲ್ಲೂಕುಗಳು. |

| ಕ್ರಮ ಸಂಖ್ಯೆ | ಕಾರ್ಮಿಕ ಅಧಿಕಾರಿಗಳ ವಿವರ ಹಾಗು ಅವರ ಕೇಂದ್ರಸ್ಥಾನಗಳು | ಕಾರ್ಯವ್ಯಾಪ್ತಿ |
|---|---|---|
| 39 | ಕಾರ್ಮಿಕ ಅಧಿಕಾರಿ, ರಾಮನಗರ. | ರಾಮನಗರ ಜಿಲ್ಲೆ. |
| 40 | ಕಾರ್ಮಿಕ ಅಧಿಕಾರಿ, ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ ಜಿಲ್ಲೆ. |
| 41 | ಕಾರ್ಮಿಕ ಅಧಿಕಾರಿ, ಯಾದಗಿರಿ. | ಯಾದಗಿರಿ ಜಿಲ್ಲೆ. |

**ಎನ್.ಆರ್. ಪ್ರಭು,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ

**ಪಿ.ಆರ್. 472**

## ಕಂದಾಯ ಸಚಿವಾಲಯ

### ಅಧಿಸೂಚನೆ-1

### ಸಂಖ್ಯೆ:ಕಂಇ 135 ಮುನೋಮು 2011, ದಿನಾಂಕ: 14.03.2012.

ಸರ್ಕಾರದ ಆದೇಶ ಸಂಖ್ಯೆ: ಎಹೆಚ್‌ಡಿ 172 ಎಎಫ್‌ಟಿ 2010, ದಿನಾಂಕ: 05-03-2011 ರಂತೆ, ಸಮಗ್ರ ಕರ್ನಾಟಕ ಕೃಷಿ-ವಾಣಿಜ್ಯ ಅಭಿವೃದ್ಧಿ ನೀತಿ 2011 ನ್ನು ಜಾರಿಗೊಳಿಸಿದ್ದು, ಈ ನೀತಿಯನ್ವಯ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ದರ್ಜೆಯ, ದೊಡ್ಡ ಮತ್ತು ಬೃಹತ್ ಕೃಷಿ ಆದಾರಿತ ಉದ್ದಿಮೆಗಳಿಗೆ ಹಾಗೂ ಕೃಷಿ ಮೂಲಭೂತ ಸೌಕರ್ಯಗಳ ಉದ್ದಿಮೆಗಳಿಗೆ ಉತ್ತೇಜನ ನೀಡುವ ದೃಷ್ಟಿಯಿಂದ ಕರ್ನಾಟಕ ಮುದ್ರಾಂಕ ಕಾಯಿದೆ, 1957 (1957ರ 34ನೇ ಕರ್ನಾಟಕ ಕಾಯಿದೆ) ಕಲಂ 9(1)(ಎ) ರಲ್ಲಿ ಹಾಗೂ ನೋಂದಣಿ ಕಾಯ್ದೆ 1908 (ಕೇಂದ್ರೀಯ ಕಾಯ್ದೆ 1908 16ನೇ ಕಾಯ್ದೆ) ಕಲಂ 78ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಮಗ್ರ ಕರ್ನಾಟಕ ಕೃಷಿ ವಾಣಿಜ್ಯ ಅಭಿವೃದ್ಧಿ ನೀತಿ 2011 ರಲ್ಲಿ ನಿರ್ದಿಷ್ಟಪಡಿಸಿದಂತೆ, ಸ್ಥಾಪಿಸಲಾಗುವ ಉದ್ದಿಮೆಗಳಿಗೆ ಈ ಕೆಳಕಂಡ ಮುದ್ರಾಂಕ ಶುಲ್ಕದಲ್ಲಿ ವಿನಾಯಿತಿ ಮತ್ತು ನೋಂದಣಿ ಶುಲ್ಕದಲ್ಲಿ ರಿಯಾಯಿತಿ ನೀಡಿ ಆದೇಶಿಸಿದೆ.

ಅ) ರಾಜ್ಯ ಸರ್ಕಾರ ಮತ್ತು ಅಥವಾ ರಾಜ್ಯ ಹಣಕಾಸು ಸಂಸ್ಥೆ, ರಾಜ್ಯ ಕೈಗಾರಿಕಾ ಬಂಡವಾಳ ಹೂಡಿಕೆ ಮತ್ತು ಅಭಿವೃದ್ಧಿ ನಿಗಮ, ರಾಷ್ಟ್ರ ಮಟ್ಟದ ಹಣಕಾಸು ಸಂಸ್ಥೆಗಳು, ವಾಣಿಜ್ಯ ಬ್ಯಾಂಕುಗಳು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು, ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಖಾದಿ ಮತ್ತು ಗ್ರಾಮೋದ್ಯೋಗ ಕಮೀಷನ್, ಕರ್ನಾಟಕ ಪರಿಶಿಷ್ಟ ಜಾತಿ/ಪಂಗಡಗಳ ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯದ ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ ಮತ್ತು ಸರ್ಕಾರದಿಂದ ಕಾಲಕಾಲಕ್ಕೆ ಅಧಿಸೂಚನೆ ಮೂಲಕ ನಿಗಧಿಪಡಿಸುವ ಸಂಸ್ಥೆಗಳಿಂದ ಅವಧಿ ಸಾಲ ಪಡೆಯಲು ಮಾಡಿಕೊಡುವ ಸಾಲ ಕರಾರು, ಕ್ರೆಡಿಟ್ ಡೀಡ್, ಅಡಮಾನ ಪತ್ರಗಳಿಗೆ ಮತ್ತು

ಆ) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಕರ್ನಾಟಕ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ, ಕರ್ನಾಟಕ ವಿದ್ಯುನ್ಮಾನ ಅಭಿವೃದ್ಧಿ ನಿಗಮ, ಕರ್ನಾಟಕ ಕೈಗಾರಿಕಾ ಬಂಡವಾಳ ಹೂಡಿಕೆ ಮತ್ತು ಅಭಿವೃದ್ಧಿ ನಿಗಮ, ಕೈಗಾರಿಕಾ ವಸಾಹತುಗಳ ಜೊತೆ ಕೈಗಾರಿಕಾ ನಿವೇಶನ, ಷೆಡ್ಡುಗಳು, ಕೈಗಾರಿಕಾ ಕಟ್ಟಡವನ್ನು ಪಡೆಯಲು ಉದ್ಯಮಗಳು ಮಾಡಿಕೊಡುವ ಗುತ್ತಿಗೆ ಪತ್ರ, ಗುತ್ತಿಗೆ ಹಾಗೂ ಕ್ರಯಪತ್ರ, ಶುದ್ಧಕ್ರಯಪತ್ರ ದಸ್ತಾವೇಜುಗಳಿಗೆ ಮತ್ತು

ಇ) ಕರ್ನಾಟಕ ಭೂ ಸುಧಾರಣೆ ಕಾಯಿದೆ, 1961 ರ ಸೆಕ್ಷನ್ 109 ರ ನಿಯಮದ ಪ್ರಕಾರ ಖರೀದಿಸುವ ಜಮೀನಿಗೆ ಮತ್ತು **SHLCC/SLSWCC/DLSWCC** ಗಳಿಂದ ಅನುಮೋದಿತವಾದ ಯೋಜನೆಗಳಿಗೆ ಕೈಗಾರಿಕೋದ್ದೇಶಗಳಿಗೆ ಪರಿವರ್ತಿತವಾದ ಜಮೀನನ್ನು ಖರೀದಿಸಲು ಮತ್ತು ಭೂ ಮಾಲೀಕರಿಗೆ ಭೂ ಸ್ವಾಧೀನ ಪಡಿಸಿಕೊಂಡಿದ್ದಕ್ಕೆ ಪರಿಹಾರವಾಗಿ ಕೆ.ಐ.ಎ.ಡಿ.ಬಿ ಯಿಂದ ಜಮೀನು ವರ್ಗಾಯಿಸುವ ಪತ್ರಗಳಿಗೆ **ಮುದ್ರಾಂಕ ಶುಲ್ಕದಲ್ಲಿ ಶೇ. 50 ರಷ್ಟು ವಿನಾಯಿತಿ ನೀಡಿದೆ.**

ಈ) **ನೋಂದಣಿ ಶುಲ್ಕದಲ್ಲಿ ರಿಯಾಯಿತಿ:** – ಮೇಲ್ಕಂಡ (ಅ) ರಿಂದ (ಇ) ರವರೆಗಿನ ಎಲ್ಲಾ ದಸ್ತಾವೇಜುಗಳಿಗೆ ಪ್ರತಿ 1,000/– ರೂ.ಗಳ ಮೌಲ್ಯಕ್ಕೆ ಒಂದು ರೂಪಾಯಿಯಂತೆ ನೋಂದಣಿ ಶುಲ್ಕ ವಿಧಿಸುವುದು.

2. ಮುದ್ರಾಂಕ ಮತ್ತು ನೋಂದಣಿ ಶುಲ್ಕ ವಿನಾಯಿತಿ/ರಿಯಾಯಿತಿ ಪಡೆಯಲು ಅನುಬಂಧ-1 ಹಾಗೂ 2 ರಲ್ಲಿ ನಿಗಧಿಪಡಿಸಿರುವಂತೆ **ಕೃಷಿ ಇಲಾಖೆಯ ಅಧಿಕಾರಿಗಳಿಂದ ದೃಢೀಕರಿಸಲ್ಪಟ್ಟ** ಪ್ರಪತ್ರವನ್ನು ದಸ್ತಾವೇಜು ನೋಂದಣಿ ಸಮಯದಲ್ಲಿ ಒದಗಿಸುವುದು. ಈ ಪ್ರಪತ್ರದಲ್ಲಿ ಪ್ರಮಾಣೀಕರಿಸಿದ ಮಾಹಿತಿಯ ಆಧಾರದ ಮೇಲೆ ಮಾತ್ರ ಮುದ್ರಾಂಕ ಶುಲ್ಕ/ನೋಂದಣಿ ಶುಲ್ಕ ರಿಯಾಯಿತಿ ನೀಡುವ ಬಗ್ಗೆ ಪರಿಶೀಲಿಸಿ ದಸ್ತಾವೇಜುಗಳನ್ನು ನೋಂದಣಿ ಮಾಡತಕ್ಕದ್ದು.

3. ಕೈಗಾರಿಕಾ ನಿವೇಶನ, ಷೆಡ್ಡುಗಳು, ಕೈಗಾರಿಕಾ ಕಟ್ಟಡಗಳು ಮೊದಲಾದವುಗಳ ಲೀಸ್-ಕಂ-ಸೇಲ್ ಕರಾರಿನ ಅವಧಿ ಮುಗಿದ ಬಳಿಕ ಮಾಡಿಕೊಳ್ಳಲಾಗುವ ಅಂತಿಮ ಕ್ರಯಪತ್ರಕ್ಕೆ ಈ ಹಿಂದೆ ಲೀಸ್ ಕಂ ಸೇಲ್ ಡೀಡ್ ಮಾಡಿಕೊಂಡಾಗ ಚಾಲ್ತಿಯಲ್ಲಿದ್ದ ಕೈಗಾರಿಕಾ ನೀತಿಯ ಪ್ರಕಾರ ನಿಗಧಿಪಡಿಸಿದ್ದ ದರದಂತೆ ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕದ ರಿಯಾಯಿತಿ ನೀಡತಕ್ಕದ್ದು.

4. ಈ ಮೇಲೆ ನೀಡಲಾಗುವ ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕದಲ್ಲಿನ ಕಡಿತವು ಹೊಸ ಕೈಗಾರಿಕಾ ನೀತಿ 2009–14 ರನ್ವಯ ನಿಗಧಿಪಡಿಸಿದ ವಲಯ 4 ಕ್ಕೆ ಸೇರಿದ ತಾಲ್ಲೂಕುಗಳಾದ ಆನೇಕಲ್, ಬೆಂಗಳೂರು ಉತ್ತರ, ಬೆಂಗಳೂರು (ದಕ್ಷಿಣ), ಬೆಂಗಳೂರು (ಪೂರ್ವ), ದೇವನಹಳ್ಳಿ, ದೊಡ್ಡಬಳ್ಳಾಪುರ, ಹೊಸಕೋಟೆ, ನೆಲಮಂಗಲ, ರಾಮನಗರ, ಚನ್ನಪಟ್ಟಣ, ಮಂಗಳೂರು (ಕಾರ್ಪೋರೇಷನ್ ಪರಿಮಿತಿ) ಮತ್ತು ಮೈಸೂರು (ಕಾರ್ಪೋರೇಷನ್ ಪರಿಮಿತಿ)–ಇವುಗಳಲ್ಲಿ ಸ್ಥಾಪಿಸುವ ಕೃಷಿ–ವಾಣಿಜ್ಯ ಉದ್ದಿಮೆಗಳಿಗೆ ಅನ್ವಯಿಸುವುದಿಲ್ಲ.

5. ಈ ವಿನಾಯಿತಿ/ರಿಯಾಯಿತಿಯು ಅಧಿಸೂಚನೆಯ ದಿನಾಂಕದಿಂದ **04–03–2016** ರವರೆಗೆ ಅಥವಾ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ಅನುಬಂಧ–1**

**ಕರ್ನಾಟಕ ಕೃಷಿ–ವಾಣಿಜ್ಯ ಅಭಿವೃದ್ಧಿ ನೀತಿ 2011 ರನ್ವಯ ಸಾಲದ ಪತ್ರಗಳ ಬಗ್ಗೆ ನೋಂದಣಿ ಶುಲ್ಕ ಮತ್ತು ಮುದ್ರಾಂಕ ಶುಲ್ಕ ರಿಯಾಯಿತಿ ದೃಢೀಕರಣ ಪತ್ರದ ನಮೂನೆ**

**ಪ್ರಮಾಣ ಪತ್ರ**

**ವಿಷಯ:** ........................... ರವರಿಗೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ರಿಯಾಯಿತಿ ದೃಢೀಕರಣ ಪತ್ರ ನೀಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂಖ್ಯೆ: ಎಹೆಚ್‌ಡಿ 172 ಎಎಫ್‌ಟಿ 2010, ಬೆಂಗಳೂರು, ದಿನಾಂಕ: 05–03–2011.

2. ಕಂದಾಯ ಇಲಾಖೆ ಅಧಿಸೂಚನೆ ಸಂಖ್ಯೆ: ಕಂಇ/______/ಮುನೋಮು/______, ದಿನಾಂಕ: ______________

3. ಮೆ: ................................ರವರ ಪತ್ರ ಸಂಖ್ಯೆ: .............................................., ದಿನಾಂಕ: ...........................

*************

(i) ಮೆ: .................................ನ ಮಾಲೀಕರಾದ/ಪಾಲುದಾರರಾದ/ವ್ಯವಸ್ಥಾಪಕ ನಿರ್ದೇಶಕರಾದ/ ನಿರ್ದೇಶಕರಾದ ಶ್ರೀ ................................. ರವರು ಪ್ರತಿನಿಧಿಸುತ್ತಿದ್ದು, ಈ ಘಟಕವು ಕೃಷಿ–ವಾಣಿಜ್ಯ ಉದ್ದಿಮೆಯಾಗಿದ್ದು, ವಿಸ್ತರಣೆ/ನವೀಕರಣ/ವೈವಿದ್ದೀಕರಣ ಕೈಗೊಂಡಿದ್ದು, ಕರ್ನಾಟಕ ಕೃಷಿ ಇಲಾಖೆಯ /ಭಾರತ ಸರ್ಕಾರದ ಪತ್ರ ಸಂಖ್ಯೆ: ................................. ದಿನಾಂಕ: .................... ರನ್ವಯ...... ಅನುಮತಿ/ಪರವಾನಗಿ ಪಡೆದಿರುತ್ತದೆ.

(ii) ಈ ಘಟಕವು ಸರ್ಕಾರದ ಆದೇಶ ಸಂಖ್ಯೆ: ಎಹೆಚ್‌ಡಿ 172 ಎಎಫ್‌ಟಿ 2010, ಬೆಂಗಳೂರು ದಿನಾಂಕ: 05–03–2011 ರನ್ವಯ ಕೃಷಿ–ವಾಣಿಜ್ಯ ಉದ್ದಿಮೆಗಳಿಗೆ ನೀಡಲಾಗುವ ಉತ್ತೇಜನಗಳು ಮತ್ತು ರಿಯಾಯಿತಿಗಳಂತೆ ವಲಯ .......................... ರಲ್ಲಿ ಸ್ಥಾಪಿತಗೊಂಡಿದ್ದು, ಮೆಗಾ ಯೋಜನೆ/ದೊಡ್ಡ/ಮಧ್ಯಮ/ಸಣ್ಣ/ಸೂಕ್ಷ್ಮ ಉದ್ಯಮ ಎಂದು ದೃಢೀಕರಿಸಿದೆ.

(iii) ಈ ಉದ್ದಿಮೆಗೆ ................................(ಸಾಲ ನೀಡುವ ಬ್ಯಾಂಕ್)/ ಸಂಸ್ಥೆ ವಿವರ ನೀಡುವುದು) ರವರು ರೂ. ........ ಅವಧಿ ಸಾಲವನ್ನು ರೂ. ............................ ಯೋಜನಾ ವೆಚ್ಚದಲ್ಲಿ .................................ಮಂಜೂರು ಮಾಡಿರುತ್ತದೆ.

(iv) ಈ ಘಟಕದ ಪ್ರಸ್ತಾಪಿತ ಯೋಜನೆಯನ್ನು **DLSWCC/SLSWCC/SHLCC** ರವರು ದಿ: ................... ರಂದು ನಡೆದ......................ಸಭೆಯಲ್ಲಿ ಅನುಮೋದಿಸಿದ್ದಾರೆ.

(v) ಈ ಉದ್ದಿಮೆಯು ಅವಧಿ ಸಾಲ ಪಡೆಯುವ ಹಿನ್ನಲೆಯಲ್ಲಿ ಸಾಲ ಕರಾರು/ಕ್ರೆಡಿಟ್ ಡೀಡ್/ಅಡಮಾನ/ಬಾಡಿಗೆ ಪತ್ರಗಳ ಮುದ್ರಾಂಕ ಶುಲ್ಕದಲ್ಲಿ ಶೇ. 100/75 ರಷ್ಟು ರಿಯಾಯಿತಿ ಪಡೆಯಲು ಹಾಗೂ ನೋಂದಣಿ ಶುಲ್ಕದಲ್ಲಿ ದಸ್ತಾವೇಜು ಮೌಲ್ಯದ ಪ್ರತಿ ರೂ. 1000/– ಕ್ಕೆ ರೂ. 1/– ನ್ನು ಮಾತ್ರ ಪಾವತಿಸಲು ಅರ್ಹರಿರುವುದಾಗಿ ದೃಢೀಕರಿಸಿದೆ.

.......................................... ಅಧಿಕಾರಿ

ಕರ್ನಾಟಕ ಕೃಷಿ ಇಲಾಖೆ ______________

**ಅನುಬಂಧ–2**

**ಕರ್ನಾಟಕ ಕೃಷಿ–ವಾಣಿಜ್ಯ ನೀತಿ 2011 ರನ್ವಯ ಗುತ್ತಿಗೆ, ಗುತ್ತಿಗೆ ಹಾಗೂ ಕ್ರಯ, ಕ್ರಯಪತ್ರಗಳ ಬಗ್ಗೆ ನೋಂದಣಿ ಶುಲ್ಕ ಮತ್ತು ಮುದ್ರಾಂಕ ಶುಲ್ಕ ರಿಯಾಯಿತಿ ದೃಢೀಕರಣ ಪತ್ರದ ನಮೂನೆ**

**ಪ್ರಮಾಣ ಪತ್ರ**

**ವಿಷಯ:** ............................ ರವರಿಗೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ರಿಯಾಯಿತಿ ದೃಢೀಕರಣ ಪತ್ರ ನೀಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂಖ್ಯೆ: ಎಹೆಚ್‌ಡಿ 172 ಎಎಫ್‌ಟಿ 2010, ಬೆಂಗಳೂರು, ದಿನಾಂಕ: 05–03–2011

2. ಕಂದಾಯ ಇಲಾಖೆ ಅಧಿಸೂಚನೆ ಸಂಖ್ಯೆ: ಕಂಇ/______/ಮುನೋಮು/______, ದಿನಾಂಕ: ______________

3. ಮೆ: ................................ರವರ ಪತ್ರ ಸಂಖ್ಯೆ: ..............................................., ದಿನಾಂಕ: ............................

4. .......................... ರವರು ಸದರಿ ಘಟಕಕ್ಕೆ ನೀಡಿರುವ ಅಲಾಟ್‌ಮೆಂಟ್ ಪತ್ರ ಸಂಖ್ಯೆ: ....................................
ದಿನಾಂಕ: ...............................

*************

(i) ಮೆ: ..................................ನ ಮಾಲೀಕರಾದ/ಪಾಲುದಾರರಾದ/ವ್ಯವಸ್ಥಾಪಕ ನಿರ್ದೇಶಕರಾದ/ನಿರ್ದೇಶಕರಾದ ಶ್ರೀ ................................. ರವರು ಪ್ರತಿನಿಧಿಸುತ್ತಿದ್ದು, ಈ ಘಟಕವು ಕೃಷಿ–ವಾಣಿಜ್ಯ ಉದ್ದಿಮೆಯಾಗಿದ್ದು, ವಿಸ್ತರಣೆ/ನವೀಕರಣ/ವೈವಿದ್ಧೀಕರಣ ಕೈಗೊಂಡಿದ್ದು, ಕರ್ನಾಟಕ ಕೃಷಿ ಇಲಾಖೆಯ/ಭಾರತ ಸರ್ಕಾರದ ಪತ್ರ ಸಂಖ್ಯೆ: ................................. ದಿನಾಂಕ: ................... ರನ್ವಯ...... ಅನುಮತಿ/ಪರವಾನಗಿ ಪಡೆದಿರುತ್ತದೆ.

(ii) ಈ ಘಟಕವು ಸರ್ಕಾರಿ ಆದೇಶ ಸಂಖ್ಯೆ: ಎಹೆಚ್‌ಡಿ 172 ಎಎಫ್‌ಟಿ 2010, ಬೆಂಗಳೂರು ದಿನಾಂಕ: 05–03–2011 ರನ್ವಯ ಕೃಷಿ–ವಾಣಿಜ್ಯ ಉದ್ದಿಮೆಗಳಿಗೆ ನೀಡಲಾಗುವ ಉತ್ತೇಜನಗಳು ಮತ್ತು ರಿಯಾಯಿತಿಗಳಂತೆ ವಲಯ .......................... ರಲ್ಲಿ ಸ್ಥಾಪಿತಗೊಂಡಿದ್ದು, ಮೆಗಾ ಯೋಜನೆ/ದೊಡ್ಡ/ಮಧ್ಯಮ/ಸಣ್ಣ/ಸೂಕ್ಷ್ಮ ಉದ್ಯಮ ಎಂದು ದೃಢೀಕರಿಸಿದೆ.

(iii) ಈ ಉದ್ದಿಮೆಗೆ ಕೆಐಎಡಿಬಿ/ಕೆಎಸ್‌ಎಸ್‌ಐಡಿಸಿ/ಕಿಯೋನಿಕ್ಸ್/ಕೆಎಸ್‌ಐಐಡಿಸಿ/ಇಂಡಸ್ಟ್ರಿಯಲ್ ಕೋ ಆಪರೇಟೀವ್ ಸೊಸೈಟಿ/ಅನುಮೋದಿತ ಕೈಗಾರಿಕಾ ಪ್ರದೇಶದವರಿಂದ ...............................................ಚ.ಮೀ//......................... ಎಕರೆ ಮಳಿಗೆ/ನಿವೇಶನ/ಟೆನಮೆಂಟನ್ನು ....................... ಹಂಚಿಕೆ ಮಾಡಿರುತ್ತದೆ ಅಥವಾ ಘಟಕವು ಕೆಎಲ್‌ಆರ್ ಕಾಯ್ದೆ ನಿಯಮ 109 ರಡಿ ............ ಎಕರೆ ಜಮೀನು ಖರೀದಿಸಿರುತ್ತದೆ ಅಥವಾ ............. ರಿಂದ ............... ಎಕರೆ ಪರಿವರ್ತಿತ ಭೂಮಿಯನ್ನು **DLSWCC/SLSWCC/SHLCC** ಅನುಮೋದನೆಯಂತೆ ಖರೀದಿಸಿರುತ್ತದೆ.

(iv) ಈ ಘಟಕದ ಪ್ರಸ್ತಾಪಿತ ಯೋಜನೆಯನ್ನು **DLSWCC/SLSWCC/SHLCC** ರವರು ದಿ: ................... ರಂದು ನಡೆದ .......................ಸಭೆಯಲ್ಲಿ ಅನುಮೋದಿಸಿದ್ದಾರೆ.

(v) ಈ ಮೇಲ್ಕಂಡ ಕ್ರ.ಸಂ. (3) ರಂತೆ ಈ ಉದ್ದಿಮೆಗೆ ನಿವೇಶನ/ಮಳಿಗೆ/ಟೆನಮೆಂಟ್‌ನ ಲೀಸ್–ಡೀಡ್/ಲೀಸ್ ಕಂ ಸೇಲ್ ಡೀಡ್/ಶುದ್ಧಕ್ರಯ ಪತ್ರ ಪಡೆಯುವ ಹಿನ್ನಲೆಯಲ್ಲಿ ಮುದ್ರಾಂಕ ಶುಲ್ಕದಲ್ಲಿ ಶೇ. 100/75 ರಷ್ಟು ರಿಯಾಯಿತಿ ಪಡೆಯಲು ಹಾಗೂ ನೋಂದಣಿ ಶುಲ್ಕದಲ್ಲಿ ದಸ್ತಾವೇಜು ಮೌಲ್ಯದ ಪ್ರತಿ ರೂ. 1000/– ಕ್ಕೆ ರೂ. 1/– ನ್ನು ಮಾತ್ರ ಪಾವತಿಸಲು ಅರ್ಹರಿರುವುದಾಗಿ ದೃಢೀಕರಿಸಿದೆ.

.......................................... ಅಧಿಕಾರಿ

ಕರ್ನಾಟಕ ಕೃಷಿ ಇಲಾಖೆ ______________

ಪಿ.ಆರ್. **458**

## ಕಂದಾಯ ಸಚಿವಾಲಯ

### ಅಧಿಸೂಚನೆ-2

**ಸಂಖ್ಯೆ:ಕಂಇ 135 ಮುನೋಮು 2011, ದಿನಾಂಕ: 14.03.2012.**

ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 10 ಪಿಆರ್ಎಂ 2008, ಬೆಂಗಳೂರು ದಿನಾಂಕ: 25/02/2010 ರಲ್ಲಿ ಜಾರಿಯಲ್ಲಿರುವಂತೆ, ಕರ್ನಾಟಕ ರಾಜ್ಯದ ಸೆಮಿ ಕಂಡಕ್ಟರ್ ನೀತಿ 2010 ಪ್ರಕಟಿಸಲಾಗಿದ್ದು, ಈ ನೀತಿಯನ್ವಯ ಅರ್ಹವುಳ್ಳ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ದರ್ಜೆಯ, ದೊಡ್ಡ ಮತ್ತು ಬೃಹತ್ ಸೆಮಿ ಕಂಡಕ್ಟರ್ ಉದ್ದಿಮೆಗಳಿಗೆ ಉತ್ತೇಜನ ನೀಡುವ ದೃಷ್ಟಿಯಿಂದ ಕರ್ನಾಟಕ ಮುದ್ರಾಂಕ ಕಾಯ್ದೆ 1957 ರ (34ನೇ ಕರ್ನಾಟಕ ಕಾಯ್ದೆ) ಕಲಂ 9(1)(ಎ) ರಲ್ಲಿ ಹಾಗೂ ನೋಂದಣಿ ಕಾಯ್ದೆ 1908 ರ (ಕೇಂದ್ರೀಯ ಕಾಯ್ದೆ 16) ಕಲಂ 78 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸೆಮಿ ಕಂಡಕ್ಟರ್ ನೀತಿ 2011 ರಲ್ಲಿ ನಿರ್ಧಿಷ್ಟಪಡಿಸಿದಂತೆ ಅನುಬಂಧ-1 ರಲ್ಲಿರುವ ವಲಯ-1, 2 ಮತ್ತು 3 ರಲ್ಲಿ ಸ್ಥಾಪಿಸಲಾಗುವ ಉದ್ದಿಮೆಗಳಿಗೆ ಈ ಕೆಳಕಂಡ ಮುದ್ರಾಂಕ ಶುಲ್ಕದಲ್ಲಿ ವಿನಾಯಿತಿ ಮತ್ತು ನೋಂದಣಿ ಶುಲ್ಕದಲ್ಲಿ ರಿಯಾಯಿತಿ ನೀಡಿ ಆದೇಶಿಸಿದೆ.

ಅ) ರಾಜ್ಯ ಸರ್ಕಾರ ಅಥವಾ ರಾಜ್ಯ ಆರ್ಥಿಕ ನಿಗಮಗಳು, ಕೈಗಾರಿಕೆ ಹಣ ಹೂಡಿಕೆ ಅಭಿವೃದ್ಧಿ ನಿಗಮ, ರಾಷ್ಟ್ರ ಮಟ್ಟದ ಆರ್ಥಿಕ ಸಂಸ್ಥೆಗಳು, ವಾಣಿಜ್ಯ ಬ್ಯಾಂಕುಗಳು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು, ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಖಾದಿ ಮತ್ತು ಗ್ರಾಮೋದ್ಯೋಗ ಕಮೀಷನ್, ಕರ್ನಾಟಕ ಪರಿಶಿಷ್ಟ ಜಾತಿ/ಪಂಗಡಗಳ ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯದ ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ ಮತ್ತು ಸರ್ಕಾರದಿಂದ ಕಾಲಕಾಲಕ್ಕೆ ಅಧಿಸೂಚನೆ ಮೂಲಕ ನಿಗಧಿಪಡಿಸುವ ಸಂಸ್ಥೆಗಳಿಂದ ಅವಧಿ ಸಾಲ ಪಡೆಯಲು ಮಾಡಿಕೊಡುವ ಸಾಲ ಕರಾರು, ಕ್ರೆಡಿಟ್ ಡೀಡ್, ಅಡಮಾನ ಪತ್ರಗಳಿಗೆ ಮತ್ತು

ಆ) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಕರ್ನಾಟಕ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ, ಕರ್ನಾಟಕ ವಿದ್ಯುನ್ಮಾನ ಅಭಿವೃದ್ಧಿ ನಿಗಮ, ಕರ್ನಾಟಕ ಕೈಗಾರಿಕಾ ಬಂಡವಾಳ ಹೂಡಿಕೆ ಮತ್ತು ಅಭಿವೃದ್ಧಿ ನಿಗಮ, ಕೈಗಾರಿಕಾ ವಸಾಹತುಗಳ ಜೊತೆ ಕೈಗಾರಿಕಾ ನಿವೇಶನ, ಷೆಡ್ಡುಗಳು, ಕೈಗಾರಿಕಾ ಕಟ್ಟಡವನ್ನು ಪಡೆಯಲು ಉದ್ದಿಮೆಗಳು ಮಾಡಿಕೊಡುವ ಗುತ್ತಿಗೆ ಪತ್ರ, ಗುತ್ತಿಗೆ ಹಾಗೂ ಕ್ರಯಪತ್ರ, ಶುದ್ಧಕ್ರಯಪತ್ರ ದಸ್ತಾವೇಜುಗಳಿಗೆ ಮತ್ತು

ಇ) ಕರ್ನಾಟಕ ಭೂ ಸುಧಾರಣೆ ಕಾಯಿದೆ, 1961 ರ ಸೆಕ್ಷನ್ 109 ರ ನಿಯಮದ ಪ್ರಕಾರ ಖರೀದಿಸುವ ಜಮೀನಿಗೆ ಮತ್ತು **SHLCC/SLSWCC/DLSWCC** ಗಳಿಂದ ಅನುಮೋದಿತವಾದ ಯೋಜನೆಗಳಿಗೆ ಕೈಗಾರಿಕೋದ್ದೇಶಗಳಿಗೆ ಪರಿವರ್ತಿತವಾದ ಜಮೀನನ್ನು ಖರೀದಿಸಲು ಮತ್ತು ಭೂ ಮಾಲೀಕರಿಗೆ ಭೂ ಸ್ವಾಧೀನ ಪಡಿಸಿಕೊಂಡಿದ್ದಕ್ಕೆ ಪರಿಹಾರವಾಗಿ ಕೆ.ಐ.ಎ.ಡಿ.ಬಿ ಯಿಂದ ಜಮೀನು ವರ್ಗಾಯಿಸುವ ಪತ್ರಗಳಿಗೆ

| ವಲಯ | ಮುದ್ರಾಂಕ ಶುಲ್ಕದಲ್ಲಿ ವಿನಾಯಿತಿ | ನೋಂದಣಿ ಶುಲ್ಕದಲ್ಲಿ ರಿಯಾಯಿತಿ |
|---|---|---|
| 1 ಮತ್ತು 2 | ಶೇ. 100 ರಷ್ಟು | ಪ್ರತಿ ರೂ. 1000/- ಮೌಲ್ಯಕ್ಕೆ ರೂ. 1 ರಂತೆ ಶುಲ್ಕ ವಿಧಿಸುವುದು |
| 3 | ಶೇ. 75 ರಷ್ಟು | ಪ್ರತಿ ರೂ. 1000/- ಮೌಲ್ಯಕ್ಕೆ ರೂ. 1 ರಂತೆ ಶುಲ್ಕ ವಿಧಿಸುವುದು |
| 4 | ಯಾವುದೇ ವಿನಾಯ್ತಿ ಇಲ್ಲ | ಯಾವುದೇ ರಿಯಾಯ್ತಿ ಇಲ್ಲ |

2. ಮುದ್ರಾಂಕ ಮತ್ತು ನೋಂದಣಿ ಶುಲ್ಕ ವಿನಾಯಿತಿ/ರಿಯಾಯಿತಿ ಪಡೆಯಲು ಅನುಬಂಧ-2 ಹಾಗೂ 3ರಲ್ಲಿ ನಿಗಧಿಪಡಿಸಿರುವಂತೆ **ಮಾಹಿತಿ ತಂತ್ರಜ್ಞಾನ ಇಲಾಖೆಯ ಮತ್ತು ಕರ್ನಾಟಕ ಜೈವಿಕ ತಂತ್ರಜ್ಞಾನ ಅಧಿಕಾರಿಗಳಿಂದ** ದೃಢೀಕರಿಸಲ್ಪಟ್ಟ ಪ್ರಪತ್ರವನ್ನು ದಸ್ತಾವೇಜು ನೋಂದಣಿ ಸಮಯದಲ್ಲಿ ಒದಗಿಸುವುದು. ಈ ಪ್ರಪತ್ರದಲ್ಲಿ ಪ್ರಮಾಣೀಕರಿಸಿದ ಮಾಹಿತಿಯ ಆಧಾರದ ಮೇಲೆ ಮಾತ್ರ ಮುದ್ರಾಂಕ ಶುಲ್ಕ/ನೋಂದಣಿ ಶುಲ್ಕ ರಿಯಾಯಿತಿ ನೀಡುವ ಬಗ್ಗೆ ಪರಿಶೀಲಿಸಿ ದಸ್ತಾವೇಜುಗಳನ್ನು ನೋಂದಣಿ ಮಾಡತಕ್ಕದ್ದು.

3. ಕೈಗಾರಿಕಾ ನಿವೇಶನ, ಷೆಡ್ಡುಗಳು, ಕೈಗಾರಿಕಾ ಕಟ್ಟಡಗಳು ಮೊದಲಾದವುಗಳ ಲೀಸ್-ಕಂ-ಸೇಲ್ ಕರಾರಿನ ಅವಧಿ ಮುಗಿದ ಬಳಿಕ ಮಾಡಿಕೊಳ್ಳಲಾಗುವ ಅಂತಿಮ ಕ್ರಯಪತ್ರಕ್ಕೆ ಈ ಹಿಂದೆ ಲೀಸ್ ಕಂ ಸೇಲ್ ಡೀಡ್ ಮಾಡಿಕೊಂಡಾಗ ಚಾಲ್ತಿಯಲ್ಲಿದ್ದ ಕೈಗಾರಿಕಾ ನೀತಿಯ ಪ್ರಕಾರ ನಿಗಧಿಪಡಿಸಿದ್ದ ದರದಂತೆ ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕದ ರಿಯಾಯಿತಿ ನೀಡತಕ್ಕದ್ದು.

4. ಈ ವಿನಾಯಿತಿ/ರಿಯಾಯಿತಿಯು ಅಧಿಸೂಚನೆಯ ದಿನಾಂಕದಿಂದ **24–02–2015** ರವರೆಗೆ ಅಥವಾ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

## ಅನುಬಂಧ–2

## ಕರ್ನಾಟಕ ಸೆಮಿ ಕಂಡಕ್ಟರ್ 2010 ರ ನೀತಿಯನ್ವಯ ಸಾಲದ ಪತ್ರಗಳ ಬಗ್ಗೆ ನೋಂದಣಿ ಶುಲ್ಕ ಮತ್ತು ಮುದ್ರಾಂಕ ಶುಲ್ಕ ರಿಯಾಯಿತಿ ದೃಢೀಕರಣ ಪತ್ರದ ನಮೂನೆ

## ಪ್ರಮಾಣ ಪತ್ರ

ವಿಷಯ: ............................ ರವರಿಗೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ರಿಯಾಯಿತಿ ದೃಢೀಕರಣ ಪತ್ರ ನೀಡುವ ಬಗ್ಗೆ.

ಉಲ್ಲೇಖ: 1. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 10 ಪಿಆರ್ಎಂ 2008, ಬೆಂಗಳೂರು, ದಿನಾಂಕ: 25/02/2010

2. ಕಂದಾಯ ಇಲಾಖೆ ಅಧಿಸೂಚನೆ ಸಂಖ್ಯೆ: ಕಂಇ/______/ಮುನೋಮು/______, ದಿನಾಂಕ: ______________

3. ಮೆ: ................................ರವರ ಪತ್ರ ಸಂಖ್ಯೆ: .............................................. ದಿನಾಂಕ: ............................

*************

(i) ಮೆ: ..................................ನ ಮಾಲೀಕರಾದ/ಪಾಲುದಾರರಾದ/ವ್ಯವಸ್ಥಾಪಕ ನಿರ್ದೇಶಕರಾದ/ನಿರ್ದೇಶಕರಾದ ಶ್ರೀ .................................. ರವರು ಪ್ರತಿನಿಧಿಸುತ್ತಿದ್ದು, ಈ ಘಟಕವು ಸೆಮಿ ಕಂಡಕ್ಟರ್ ಉದ್ದಿಮೆಯಾಗಿದ್ದು/ವಿಸ್ತರಣೆ/ನವೀಕರಣ/ವೈವಿಧ್ಯೀಕರಣ ಕೈಗೊಂಡಿದ್ದು, ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ /ಭಾರತ ಸರ್ಕಾರದ ಪತ್ರ ಸಂಖ್ಯೆ: .................................. ದಿನಾಂಕ: ................... ರನ್ವಯ...... ಅನುಮತಿ/ಪರವಾನಗಿ ಪಡೆದಿರುತ್ತದೆ.

(ii) ಈ ಘಟಕವು ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 10 ಪಿಆರ್ಎಂ 2008, ಬೆಂಗಳೂರು ದಿನಾಂಕ: 25/02/2010ರ ಪ್ರಕಾರ ಸೆಮಿ ಕಂಡಕ್ಟರ್ ಉದ್ದಿಮೆಗಳಿಗೆ ನೀಡಲಾಗುವ ಉತ್ತೇಜನಗಳು ಮತ್ತು ರಿಯಾಯಿತಿಗಳಂತೆ ವಲಯ .......................... ರಲ್ಲಿ ಸ್ಥಾಪಿತಗೊಂಡಿದ್ದು, ಮೆಗಾ ಯೋಜನೆ /ದೊಡ್ಡ/ಮಧ್ಯಮ/ಸಣ್ಣ/ಸೂಕ್ಷ್ಮ ಉದ್ಯಮ ಎಂದು ದೃಢೀಕರಿಸಿದೆ.

(iii) ಈ ಉದ್ದಿಮೆಗೆ .................................(ಸಾಲ ನೀಡುವ ಬ್ಯಾಂಕ್)/ ಸಂಸ್ಥೆ ವಿವರ ನೀಡುವುದು) ರವರು ರೂ. ........ ಅವಧಿ ಸಾಲವನ್ನು ರೂ. ............................ ಯೋಜನಾ ವೆಚ್ಚದಲ್ಲಿ .................................. ಮಂಜೂರು ಮಾಡಿರುತ್ತದೆ.

(iv) ಈ ಘಟಕದ ಪ್ರಸ್ತಾಪಿತ ಯೋಜನೆಯನ್ನು **DLSWCC/SLSWCC/SHLCC** ರವರು ದಿ: ................... ರಂದು ನಡೆದ ಇವರ .......................ಸಭೆಯಲ್ಲಿ ಅನುಮೋದಿಸಿದ್ದಾರೆ.

(v) ಈ ಉದ್ದಿಮೆಯು ಅವಧಿ ಸಾಲ ಪಡೆಯುವ ಹಿನ್ನಲೆಯಲ್ಲಿ ಸಾಲ ಕರಾರು/ಕ್ರೆಡಿಟ್ ಡೀಡ್/ಅಡಮಾನ/ಬಾಡಿಗೆ ಪತ್ರಗಳ ಮುದ್ರಾಂಕ ಶುಲ್ಕದಲ್ಲಿ ಶೇ. 100/75 ರಷ್ಟು ರಿಯಾಯಿತಿ ಪಡೆಯಲು ಹಾಗೂ ನೋಂದಣಿ ಶುಲ್ಕದಲ್ಲಿ ದಸ್ತಾವೇಜು ಮೌಲ್ಯದ ಪ್ರತಿ ರೂ. 1000/– ಕ್ಕೆ ರೂ. 1/– ನ್ನು ಮಾತ್ರ ಪಾವತಿಸಲು ಅರ್ಹರಿರುವುದಾಗಿ ದೃಢೀಕರಿಸಿದೆ.

.......................................... **ಅಧಿಕಾರಿ**

**ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ**
**ತಂತ್ರಜ್ಞಾನ ಇಲಾಖೆ** ______________

## ಅನುಬಂಧ–3

## ಕರ್ನಾಟಕ ಸೆಮಿ ಕಂಡಕ್ಟರ್ 2010 ರ ನೀತಿಯನ್ವಯ ಗುತ್ತಿಗೆ, ಗುತ್ತಿಗೆ ಹಾಗೂ ಕ್ರಯ, ಕ್ರಯಪತ್ರಗಳ ಬಗ್ಗೆ ನೋಂದಣಿ ಶುಲ್ಕ ಮತ್ತು ಮುದ್ರಾಂಕ ಶುಲ್ಕ ರಿಯಾಯಿತಿ ದೃಢೀಕರಣ ಪತ್ರದ ನಮೂನೆ

## ಪ್ರಮಾಣ ಪತ್ರ

ವಿಷಯ: ........................... ರವರಿಗೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ರಿಯಾಯಿತಿ ದೃಢೀಕರಣ ಪತ್ರ ನೀಡುವ ಬಗ್ಗೆ.

ಉಲ್ಲೇಖ: 1. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 10 ಪಿಆರ್‌ಎಂ 2008, ಬೆಂಗಳೂರು, ದಿನಾಂಕ: 25/02/2010

2. ಕಂದಾಯ ಇಲಾಖೆ ಅಧಿಸೂಚನೆ ಸಂಖ್ಯೆ: ಕಂಇ/______/ಮುನೋಮು/______, ದಿನಾಂಕ: ______________

3. ಮೆ: ...............................ರವರ ಪತ್ರ ಸಂಖ್ಯೆ: ..............................................., ದಿನಾಂಕ: ..........................

4. .......................... ರವರು ಸದರಿ ಘಟಕಕ್ಕೆ ನೀಡಿರುವ ಅಲಾಟ್‌ಮೆಂಟ್ ಪತ್ರ ಸಂಖ್ಯೆ: ....................................
ದಿನಾಂಕ: ..............................

*************

(i) ಮೆ: .................................ನ ಮಾಲೀಕರಾದ/ಪಾಲುದಾರರಾದ/ವ್ಯವಸ್ಥಾಪಕ ನಿರ್ದೇಶಕರಾದ/ನಿರ್ದೇಶಕರಾದ ಶ್ರೀ ................................. ರವರು ಪ್ರತಿನಿಧಿಸುತ್ತಿದ್ದು, ಈ ಘಟಕವು ಸೆಮಿ ಕಂಡಕ್ಟರ್ ಘಟಕವಾಗಿದ್ದು, ವಿಸ್ತರಣೆ/ನವೀಕರಣ/ವೈವಿಧ್ಯೀಕರಣ ಕೈಗೊಂಡಿದ್ದು, ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ/ಭಾರತ ಸರ್ಕಾರದ ಪತ್ರ ಸಂಖ್ಯೆ: ................................. ದಿನಾಂಕ: ................... ರನ್ವಯ...... ಅನುಮತಿ/ಪರವಾನಗಿ ಪಡೆದಿರುತ್ತದೆ.

(ii) ಈ ಘಟಕವು ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 10 ಪಿಆರ್‌ಎಂ 2008, ಬೆಂಗಳೂರು ದಿನಾಂಕ: 25/02/2010 ರನ್ವಯ ಸೆಮಿ ಕಂಡಕ್ಟರ್ ಉದ್ದಿಮೆಗಳಿಗೆ ನೀಡಲಾಗುವ ಉತ್ತೇಜನಗಳು ಮತ್ತು ರಿಯಾಯಿತಿಗಳಂತೆ ವಲಯ .......................... ರಲ್ಲಿ ಸ್ಥಾಪಿತಗೊಂಡಿದ್ದು, ಮೆಗಾ ಯೋಜನೆ/ದೊಡ್ಡ/ಮಧ್ಯಮ/ಸಣ್ಣ/ಸೂಕ್ಷ್ಮ ಉದ್ಯಮ ಎಂದು ದೃಢೀಕರಿಸಿದೆ.

(iii) ಈ ಉದ್ದಿಮೆಗೆ ಕೆಐಎಡಿಬಿ/ಕೆಎಸ್‌ಎಸ್‌ಐಡಿಸಿ/ಕಿಯೋನಿಕ್ಸ್/ಕೆಎಸ್‌ಐಐಡಿಸಿ/ಇಂಡಸ್ಟ್ರಿಯಲ್ ಕೋ ಆಪರೇಟೀವ್ ಸೊಸೈಟಿ/ಅನುಮೋದಿತ ಕೈಗಾರಿಕಾ ಪ್ರದೇಶದವರಿಂದ ...............................................ಚ.ಮೀ//......................... ಎಕರೆ ಮಳಿಗೆ/ನಿವೇಶನ/ಟೆನಮೆಂಟನ್ನು ....................... ಹಂಚಿಕೆ ಮಾಡಿರುತ್ತದೆ ಅಥವಾ ಘಟಕವು ಕೆಎಲ್‌ಆರ್ ಕಾಯ್ದೆ ನಿಯಮ 109 ರಡಿ ............ ಎಕರೆ ಜಮೀನು ಖರೀದಿಸಿರುತ್ತದೆ ಅಥವಾ ............. ರಿಂದ ................ ಎಕರೆ ಕೈಗಾರಿಕೋದ್ದೇಶಗಳಿಗೆ ಪರಿವರ್ತಿತ ಭೂಮಿಯನ್ನು **DLSWCC/SLSWCC/SHLCC** ಅನುಮೋದನೆಯಂತೆ ಖರೀದಿಸಿರುತ್ತದೆ.

(iv) ಈ ಉದ್ದಿಮೆಯ ಪ್ರಸ್ತಾಪಿತ ಯೋಜನೆಯನ್ನು **DLSWCC/SLSWCC/SHLCC** ರವರು ದಿ: ................... ರಂದು ನಡೆದ......................ಸಭೆಯಲ್ಲಿ ಅನುಮೋದಿಸಿದ್ದಾರೆ.

(v) ಈ ಮೇಲ್ಕಂಡ ಕ್ರ.ಸಂ. (3) ರಂತೆ ಈ ಉದ್ದಿಮೆಗೆ ನಿವೇಶನ/ಮಳಿಗೆ/ಟೆನಮೆಂಟ್‌ನ ಲೀಸ್–ಡೀಡ್/ಲೀಸ್ ಕಂ ಸೇಲ್ ಡೀಡ್/ಶುದ್ಧಕ್ರಯ ಪತ್ರ ಪಡೆಯುವ ಹಿನ್ನಲೆಯಲ್ಲಿ ಮುದ್ರಾಂಕ ಶುಲ್ಕದಲ್ಲಿ ಶೇ. 100/75 ರಷ್ಟು ರಿಯಾಯಿತಿ ಪಡೆಯಲು ಹಾಗೂ ನೋಂದಣಿ ಶುಲ್ಕದಲ್ಲಿ ದಸ್ತಾವೇಜು ಮೌಲ್ಯದ ಪ್ರತಿ ರೂ. 1000/– ಕ್ಕೆ ರೂ. 1/– ನ್ನು ಮಾತ್ರ ಪಾವತಿಸಲು ಅರ್ಹರಿರುವುದಾಗಿ ದೃಢೀಕರಿಸಿದೆ.

**......................................... ಅಧಿಕಾರಿ**
**ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು**
**ಜೈವಿಕ ತಂತ್ರಜ್ಞಾನ ಇಲಾಖೆ ______________**

**ಪಿ.ಆರ್. 459**

## ಕಂದಾಯ ಸಚಿವಾಲಯ

### ಅಧಿಸೂಚನೆ-3

### ಸಂಖ್ಯೆ:ಕಂಇ 135 ಮುನೋಮು 2011, ದಿನಾಂಕ: 14.03.2012.

ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 11 ಪಿಆರ್‌ಎಂ 2008, ಬೆಂಗಳೂರು ದಿನಾಂಕ: 02/02/2011 ರಲ್ಲಿ ಜಾರಿಯಲ್ಲಿರುವಂತೆ, ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನ ನೀತಿ 2011 **(ICT Policy)** ಪ್ರಕಟಿಸಲಾಗಿದ್ದು, ಈ ನೀತಿಯನ್ವಯ ಅರ್ಹವುಳ್ಳ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ದರ್ಜೆಯ, ದೊಡ್ಡ ಮತ್ತು ಬೃಹತ್ ಐಸಿಟಿ ಉದ್ದಿಮೆಗಳಿಗೆ ಉತ್ತೇಜನ ನೀಡುವ ದೃಷ್ಟಿಯಿಂದ, ಈಗಾಗಲೇ ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ಕಂಇ 145 ಮುನೋಮು 2011, ದಿನಾಂಕ: 27–08–2011 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂತೆಗೆದುಕೊಂಡು, ಕರ್ನಾಟಕ ಮುದ್ರಾಂಕ ಕಾಯ್ದೆ 1957 ರ (34ನೇ ಕರ್ನಾಟಕ ಕಾಯ್ದೆ) ಕಲಂ 9(1)(ಎ) ರಲ್ಲಿ ಹಾಗೂ ನೋಂದಣಿ ಕಾಯ್ದೆ 1908 ರ (ಕೇಂದ್ರೀಯ ಕಾಯ್ದೆ 16) ಕಲಂ 78 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನ ನೀತಿ 2011 **(ICT Policy)** ಯಲ್ಲಿ ನಿರ್ಧಿಷ್ಟಪಡಿಸಿದಂತೆ ಅನುಬಂಧ–1 ರಲ್ಲಿರುವ ವಲಯ–1, 2 ಮತ್ತು 3 ರಲ್ಲಿ ಸ್ಥಾಪಿಸಲಾಗುವ ಉದ್ದಿಮೆಗಳಿಗೆ, ಈ ಕೆಳಕಂಡ ಮುದ್ರಾಂಕ ಶುಲ್ಕದಲ್ಲಿ ವಿನಾಯಿತಿ ಮತ್ತು ನೋಂದಣಿ ಶುಲ್ಕದಲ್ಲಿ ರಿಯಾಯಿತಿ ನೀಡಿ ಆದೇಶಿಸಿದೆ.

ಅ) ರಾಜ್ಯ ಸರ್ಕಾರ ಅಥವಾ ರಾಜ್ಯ ಆರ್ಥಿಕ ನಿಗಮಗಳು, ಕೈಗಾರಿಕೆ ಹಣ ಹೂಡಿಕೆ ಅಭಿವೃದ್ಧಿ ನಿಗಮ, ರಾಷ್ಟ್ರ ಮಟ್ಟದ ಆರ್ಥಿಕ ಸಂಸ್ಥೆಗಳು, ವಾಣಿಜ್ಯ ಬ್ಯಾಂಕುಗಳು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು, ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಖಾದಿ ಮತ್ತು ಗ್ರಾಮೋದ್ಯೋಗ ಕಮೀಷನ್, ಕರ್ನಾಟಕ ಪರಿಶಿಷ್ಟ ಜಾತಿ/ಪಂಗಡಗಳ ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯದ ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ ಮತ್ತು ಸರ್ಕಾರದಿಂದ ಕಾಲಕಾಲಕ್ಕೆ ಅಧಿಸೂಚನೆ ಮೂಲಕ ನಿಗಧಿಪಡಿಸುವ ಸಂಸ್ಥೆಗಳಿಂದ ಅವಧಿ ಸಾಲ ಪಡೆಯಲು ಮಾಡಿಕೊಡುವ ಸಾಲ ಕರಾರು, ಕ್ರೆಡಿಟ್ ಡೀಡ್, ಅಡಮಾನ ಪತ್ರಗಳಿಗೆ ಮತ್ತು

ಆ) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಕರ್ನಾಟಕ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ, ಕರ್ನಾಟಕ ವಿದ್ಯುನ್ಮಾನ ಅಭಿವೃದ್ಧಿ ನಿಗಮ, ಕರ್ನಾಟಕ ಕೈಗಾರಿಕಾ ಬಂಡವಾಳ ಹೂಡಿಕೆ ಮತ್ತು ಅಭಿವೃದ್ಧಿ ನಿಗಮ, ಕೈಗಾರಿಕಾ ವಸಾಹತುಗಳ ಜೊತೆ ಕೈಗಾರಿಕಾ ನಿವೇಶನ, ಷೆಡ್ಡುಗಳು, ಕೈಗಾರಿಕಾ ಕಟ್ಟಡವನ್ನು ಪಡೆಯಲು ಉದ್ದಿಮೆಗಳು ಮಾಡಿಕೊಡುವ ಗುತ್ತಿಗೆ ಪತ್ರ, ಗುತ್ತಿಗೆ ಹಾಗೂ ಕ್ರಯಪತ್ರ, ಶುದ್ಧಕ್ರಯಪತ್ರ ದಸ್ತಾವೇಜುಗಳಿಗೆ ಮತ್ತು

ಇ) ಕರ್ನಾಟಕ ಭೂ ಸುಧಾರಣೆ ಕಾಯಿದೆ, 1961 ರ ಸೆಕ್ಷನ್ 109 ರ ನಿಯಮದ ಪ್ರಕಾರ ಖರೀದಿಸುವ ಜಮೀನಿಗೆ ಮತ್ತು SHLCC/SLSWCC/DLSWCC ಗಳಿಂದ ಅನುಮೋದಿತವಾದ ಯೋಜನೆಗಳಿಗೆ ಕೈಗಾರಿಕೋದ್ದೇಶಗಳಿಗೆ ಪರಿವರ್ತಿತವಾದ ಜಮೀನನ್ನು ಖರೀದಿಸಲು ಮತ್ತು ಭೂ ಮಾಲೀಕರಿಗೆ ಭೂ ಸ್ವಾಧೀನ ಪಡಿಸಿಕೊಂಡಿದ್ದಕ್ಕೆ ಪರಿಹಾರವಾಗಿ ಕೆ.ಐ.ಎ.ಡಿ.ಬಿ ಯಿಂದ ಜಮೀನು ವರ್ಗಾಯಿಸುವ ಪತ್ರಗಳಿಗೆ

| ವಲಯ | ಮುದ್ರಾಂಕ ಶುಲ್ಕದಲ್ಲಿ ವಿನಾಯಿತಿ | ನೋಂದಣಿ ಶುಲ್ಕದಲ್ಲಿ ರಿಯಾಯಿತಿ |
|---|---|---|
| 1. ಮತ್ತು 2. | ಶೇ. 100 ರಷ್ಟು | ಪ್ರತಿ ರೂ. 1000/– ಮೌಲ್ಯಕ್ಕೆ ರೂ. 1 ರಂತೆ ಶುಲ್ಕ ವಿಧಿಸುವುದು |
| 3. | ಶೇ. 75 ರಷ್ಟು | ಪ್ರತಿ ರೂ. 1000/– ಮೌಲ್ಯಕ್ಕೆ ರೂ. 1 ರಂತೆ ಶುಲ್ಕ ವಿಧಿಸುವುದು |
| 4 | ಯಾವುದೇ ವಿನಾಯ್ತಿ ಇಲ್ಲ | ಯಾವುದೇ ರಿಯಾಯ್ತಿ ಇಲ್ಲ |

2. ಮುದ್ರಾಂಕ ಮತ್ತು ನೋಂದಣಿ ಶುಲ್ಕ ವಿನಾಯಿತಿ/ರಿಯಾಯಿತಿ ಪಡೆಯಲು ಅನುಬಂಧ–2 ಹಾಗೂ 3ರಲ್ಲಿ ನಿಗಧಿಪಡಿಸಿರುವಂತೆ **ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಅಧಿಕಾರಿಗಳಿಂದ** ದೃಢೀಕರಿಸಲ್ಪಟ್ಟ ಪ್ರಪತ್ರವನ್ನು ದಸ್ತಾವೇಜು ನೋಂದಣಿ ಸಮಯದಲ್ಲಿ ಒದಗಿಸುವುದು. ಈ ಪ್ರಪತ್ರದಲ್ಲಿ ಪ್ರಮಾಣೀಕರಿಸಿದ ಮಾಹಿತಿಯ ಆಧಾರದ ಮೇಲೆ ಮಾತ್ರ ಮುದ್ರಾಂಕ ಶುಲ್ಕ/ನೋಂದಣಿ ಶುಲ್ಕ ರಿಯಾಯಿತಿ ನೀಡುವ ಬಗ್ಗೆ ಪರಿಶೀಲಿಸಿ ದಸ್ತಾವೇಜುಗಳನ್ನು ನೋಂದಣಿ ಮಾಡತಕ್ಕದ್ದು.

3. ಕೈಗಾರಿಕಾ ನಿವೇಶನ, ಷೆಡ್ಡುಗಳು, ಕೈಗಾರಿಕಾ ಕಟ್ಟಡಗಳು ಮೊದಲಾದವುಗಳ ಲೀಸ್–ಕಂ–ಸೇಲ್ ಕರಾರಿನ ಅವಧಿ ಮುಗಿದ ಬಳಿಕ ಮಾಡಿಕೊಳ್ಳಲಾಗುವ ಅಂತಿಮ ಕ್ರಯಪತ್ರಕ್ಕೆ ಈ ಹಿಂದೆ ಲೀಸ್ ಕಂ ಸೇಲ್ ಡೀಡ್ ಮಾಡಿಕೊಂಡಾಗ ಚಾಲ್ತಿಯಲ್ಲಿದ್ದ ಕೈಗಾರಿಕಾ ನೀತಿಯ ಪ್ರಕಾರ ನಿಗಧಿಪಡಿಸಿದ್ದ ದರದಂತೆ ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕದ ರಿಯಾಯಿತಿ ನೀಡತಕ್ಕದ್ದು.

4. ಈ ವಿನಾಯಿತಿ/ರಿಯಾಯಿತಿಯು ಅಧಿಸೂಚನೆಯ ದಿನಾಂಕದಿಂದ **01–02–2016** ರವರೆಗೆ ಅಥವಾ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

## ಅನುಬಂಧ–2

## ಕರ್ನಾಟಕ ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನ ನೀತಿ 2011 (ICT Policy) ರನ್ವಯ ಸಾಲದ ಪತ್ರಗಳ ಬಗ್ಗೆ ನೋಂದಣಿ ಶುಲ್ಕ ಮತ್ತು ಮುದ್ರಾಂಕ ಶುಲ್ಕ ರಿಯಾಯಿತಿ ದೃಢೀಕರಣ ಪತ್ರದ ನಮೂನೆ

## ಪ್ರಮಾಣ ಪತ್ರ

ವಿಷಯ: ........................... ರವರಿಗೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ರಿಯಾಯಿತಿ ದೃಢೀಕರಣ ಪತ್ರ ನೀಡುವ ಬಗ್ಗೆ.

ಉಲ್ಲೇಖ: 1. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 11 ಪಿಆರ್‌ಎಂ 2008, ಬೆಂಗಳೂರು, ದಿನಾಂಕ: 02/02/2011

2. ಕಂದಾಯ ಇಲಾಖೆ ಅಧಿಸೂಚನೆ ಸಂಖ್ಯೆ: ಕಂಇ/______/ಮುನೋಮು/______, ದಿನಾಂಕ: ______________

3. ಮೆ: ................................ರವರ ಪತ್ರ ಸಂಖ್ಯೆ: .............................................. ದಿನಾಂಕ: ...........................

*************

(i) ಮೆ: ..................................ನ ಮಾಲೀಕರಾದ/ಪಾಲುದಾರರಾದ/ವ್ಯವಸ್ಥಾಪಕ ನಿರ್ದೇಶಕರಾದ/ನಿರ್ದೇಶಕರಾದ ಶ್ರೀ ................................. ರವರು ಪ್ರತಿನಿಧಿಸುತ್ತಿದ್ದು, ಈ ಘಟಕವು ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನ ಉದ್ದಿಮೆಯಾಗಿದ್ದು, ವಿಸ್ತರಣೆ/ನವೀಕರಣ/ವೈವಿಧ್ಯೀಕರಣ ಕೈಗೊಂಡಿದ್ದು, ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ /ಭಾರತ ಸರ್ಕಾರದ ಪತ್ರ ಸಂಖ್ಯೆ: ................................. ದಿನಾಂಕ: ................... ರನ್ವಯ...... ಅನುಮತಿ/ಪರವಾನಗಿ ಪಡೆದಿರುತ್ತದೆ.

(ii) ಈ ಘಟಕವು ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 11 ಪಿಆರ್‌ಎಂ 2008, ಬೆಂಗಳೂರು ದಿನಾಂಕ: 02/02/2011 ರನ್ವಯ ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನ ಉದ್ದಿಮೆಗಳಿಗೆ ನೀಡಲಾಗುವ ಉತ್ತೇಜನಗಳು ಮತ್ತು ರಿಯಾಯಿತಿಗಳಂತೆ ವಲಯ .......................... ರಲ್ಲಿ ಸ್ಥಾಪಿತಗೊಂಡಿದ್ದು, ಮೆಗಾ ಯೋಜನೆ /ದೊಡ್ಡ/ಮಧ್ಯಮ/ಸಣ್ಣ/ಸೂಕ್ಷ್ಮ ಉದ್ಯಮ ಎಂದು ದೃಢೀಕರಿಸಿದೆ.

(iii) ಈ ಉದ್ದಿಮೆಗೆ................................(ಸಾಲ ನೀಡುವ ಬ್ಯಾಂಕ್)/ ಸಂಸ್ಥೆ ವಿವರ ನೀಡುವುದು) ರವರು ರೂ. ........ ಅವಧಿ ಸಾಲವನ್ನು ರೂ. ............................ ಯೋಜನಾ ವೆಚ್ಚದಲ್ಲಿ .................................. ಮಂಜೂರು ಮಾಡಿರುತ್ತದೆ.

(iv) ಈ ಘಟಕದ ಪ್ರಸ್ತಾಪಿತ ಯೋಜನೆಯನ್ನು **DLSWCC/SLSWCC/SHLCC** ರವರು ದಿ: ................... ರಂದು ನಡೆದ .......................ಸಭೆಯಲ್ಲಿ ಅನುಮೋದಿಸಿದ್ದಾರೆ.

(v) ಈ ಮೇಲ್ಕಂಡ ಕ್ರ.ಸಂ. (3) ರಂತೆ ಈ ಉದ್ದಿಮೆಗೆ ನಿವೇಶನ/ಮಳಿಗೆ/ಟೆನಮೆಂಟ್‌ನ ಲೀಸ್–ಡೀಡ್/ಲೀಸ್ ಕಂ ಸೇಲ್ ಡೀಡ್/ಶುದ್ಧಕ್ರಯ ಪತ್ರ ಪಡೆಯುವ ಹಿನ್ನಲೆಯಲ್ಲಿ ಮುದ್ರಾಂಕ ಶುಲ್ಕದಲ್ಲಿ ಶೇ. 100/75 ರಷ್ಟು ರಿಯಾಯಿತಿ ಪಡೆಯಲು ಹಾಗೂ ನೋಂದಣಿ ಶುಲ್ಕದಲ್ಲಿ ದಸ್ತಾವೇಜು ಮೌಲ್ಯದ ಪ್ರತಿ ರೂ. 1000/– ಕ್ಕೆ ರೂ. 1/– ನ್ನು ಮಾತ್ರ ಪಾವತಿಸಲು ಅರ್ಹರಿರುವುದಾಗಿ ದೃಢೀಕರಿಸಿದೆ.

**.......................................... ಅಧಿಕಾರಿ**
**ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು**
**ಜೈವಿಕ ತಂತ್ರಜ್ಞಾನ ಇಲಾಖೆ ______________**

## ಅನುಬಂಧ–3

## ಕರ್ನಾಟಕ ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನ ನೀತಿ 2011 (ICT Policy) ರನ್ವಯ ಗುತ್ತಿಗೆ, ಗುತ್ತಿಗೆ ಹಾಗೂ ಕ್ರಯ, ಕ್ರಯಪತ್ರಗಳ ಬಗ್ಗೆ ನೋಂದಣಿ ಶುಲ್ಕ ಮತ್ತು ಮುದ್ರಾಂಕ ಶುಲ್ಕ ರಿಯಾಯಿತಿ ದೃಢೀಕರಣ ಪತ್ರದ ನಮೂನೆ

## ಪ್ರಮಾಣ ಪತ್ರ

ವಿಷಯ: ........................... ರವರಿಗೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ರಿಯಾಯಿತಿ ದೃಢೀಕರಣ ಪತ್ರ ನೀಡುವ ಬಗ್ಗೆ.

ಉಲ್ಲೇಖ: 1. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 11 ಪಿಆರ್ಎಂ 2008, ಬೆಂಗಳೂರು ದಿನಾಂಕ: 02/02/2011

2. ಕಂದಾಯ ಇಲಾಖೆ ಅಧಿಸೂಚನೆ ಸಂಖ್ಯೆ: ಕಂಇ/______/ಮುನೋಮು/______, ದಿನಾಂಕ: ______________

3. ಮೆ: ...............................ರವರ ಪತ್ರ ಸಂಖ್ಯೆ: .............................................., ದಿನಾಂಕ: ..........................

4. .......................... ರವರು ಸದರಿ ಘಟಕಕ್ಕೆ ನೀಡಿರುವ ಅಲಾಟ್‌ಮೆಂಟ್ ಪತ್ರ ಸಂಖ್ಯೆ: ...................................
ದಿನಾಂಕ: ...............................

*************

(i) ಮೆ: .................................ನ ಮಾಲೀಕರಾದ/ಪಾಲುದಾರರಾದ/ವ್ಯವಸ್ಥಾಪಕ ನಿರ್ದೇಶಕರಾದ/ನಿರ್ದೇಶಕರಾದ ಶ್ರೀ ................................ ರವರು ಪ್ರತಿನಿಧಿಸುತ್ತಿದ್ದು, ಈ ಘಟಕವು ಮಾಹಿತಿ ಮತ್ತು ತಂತ್ರಜ್ಞಾನ ಘಟಕವಾಗಿದ್ದು, ವಿಸ್ತರಣೆ/ನವೀಕರಣ/ವೈವಿಧ್ದೀಕರಣ ಕೈಗೊಂಡಿದ್ದು, ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ/ಭಾರತ ಸರ್ಕಾರದ ಪತ್ರ ಸಂಖ್ಯೆ: ................................ ದಿನಾಂಕ: .................. ರನ್ವಯ...... ಅನುಮತಿ/ಪರವಾನಗಿ ಪಡೆದಿರುತ್ತದೆ.

(ii) ಈ ಘಟಕವು ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 11 ಪಿಆರ್ಎಂ 2008, ಬೆಂಗಳೂರು ದಿನಾಂಕ: 02/02/2011 ರನ್ವಯ ಮಾಹಿತಿ ಮತ್ತು ತಂತ್ರಜ್ಞಾನ ಉದ್ದಿಮೆಗಳಿಗೆ ನೀಡಲಾಗುವ ಉತ್ತೇಜನಗಳು ಮತ್ತು ರಿಯಾಯಿತಿಗಳಂತೆ ವಲಯ ......................... ರಲ್ಲಿ ಸ್ಥಾಪಿತಗೊಂಡಿದ್ದು, ಮೆಗಾ ಯೋಜನೆ/ದೊಡ್ಡ/ಮಧ್ಯಮ/ಸಣ್ಣ/ಸೂಕ್ಷ್ಮ ಉದ್ಯಮ ಎಂದು ದೃಢೀಕರಿಸಿದೆ.

(iii) ಈ ಉದ್ದಿಮೆಗೆ ಕೆಐಎಡಿಬಿ/ಕೆಎಸ್ಎಸ್ಐಡಿಸಿ/ಕಿಯೋನಿಕ್ಸ್/ಕೆಎಸ್ಐಐಡಿಸಿ/ಇಂಡಸ್ಟ್ರಿಯಲ್ ಕೋ ಆಪರೇಟೀವ್ ಸೊಸೈಟಿ/ಅನುಮೋದಿತ ಕೈಗಾರಿಕಾ ಪ್ರದೇಶದವರಿಂದ .............................................ಚ.ಮೀ//......................... ಎಕರೆ ಮಳಿಗೆ/ನಿವೇಶನ/ಟೆನಮೆಂಟನ್ನು ....................... ಹಂಚಿಕೆ ಮಾಡಿರುತ್ತದೆ ಅಥವಾ ಘಟಕವು ಕೆಎಲ್ಆರ್ ಕಾಯ್ದೆ ನಿಯಮ 109 ರಡಿ ............ ಎಕರೆ ಜಮೀನು ಖರೀದಿಸಿರುತ್ತದೆ ಅಥವಾ ............. ರಿಂದ ............... ಎಕರೆ ಪರಿವರ್ತಿತ ಭೂಮಿಯನ್ನು **DLSWCC/SLSWCC/SHLCC** ಅನುಮೋದನೆಯಂತೆ ಖರೀದಿಸಿರುತ್ತದೆ.

(iv) ಈ ಘಟಕದ ಪ್ರಸ್ತಾಪಿತ ಯೋಜನೆಯನ್ನು **DLSWCC/SLSWCC/SHLCC** ರವರು ದಿ: .................. ರಂದು ನಡೆದ ......................ಸಭೆಯಲ್ಲಿ ಅನುಮೋದಿಸಿದ್ದಾರೆ.

(v) ಈ ಮೇಲ್ಕಂಡ ಕ್ರ.ಸಂ. (3) ರಂತೆ ಈ ಉದ್ದಿಮೆಗೆ ನಿವೇಶನ/ಮಳಿಗೆ/ಟೆನಮೆಂಟ್‌ನ ಲೀಸ್–ಡೀಡ್/ಲೀಸ್ ಕಂ ಸೇಲ್ ಡೀಡ್/ಶುದ್ಧಕ್ರಯ ಪತ್ರ ಪಡೆಯುವ ಹಿನ್ನಲೆಯಲ್ಲಿ ಮುದ್ರಾಂಕ ಶುಲ್ಕದಲ್ಲಿ ಶೇ. 100/75 ರಷ್ಟು ರಿಯಾಯಿತಿ ಪಡೆಯಲು ಹಾಗೂ ನೋಂದಣಿ ಶುಲ್ಕದಲ್ಲಿ ದಸ್ತಾವೇಜು ಮೌಲ್ಯದ ಪ್ರತಿ ರೂ. 1000/– ಕ್ಕೆ ರೂ. 1/– ನ್ನು ಮಾತ್ರ ಪಾವತಿಸಲು ಅರ್ಹರಿರುವುದಾಗಿ ದೃಢೀಕರಿಸಿದೆ.

......................................... **ಅಧಿಕಾರಿ**
**ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು**
**ಜೈವಿಕ ತಂತ್ರಜ್ಞಾನ ಇಲಾಖೆ** ______________

## ಕಂದಾಯ ಸಚಿವಾಲಯ

### ಅಧಿಸೂಚನೆ-4

### ಸಂಖ್ಯೆ:ಕಂಇ 135 ಮುನೋಮು 2011, ದಿನಾಂಕ: 14.03.2012.

ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 09 ಪಿಆರ್‌ಎಂ 2008, ಬೆಂಗಳೂರು ದಿನಾಂಕ: 29/01/2011 ರಲ್ಲಿ ಜಾರಿಯಲ್ಲಿರುವಂತೆ, ಕರ್ನಾಟಕ ರಾಜ್ಯದ ಎಲೆಕ್ಟ್ರಾನಿಕ್ಸ್ ಹಾರ್ಡ್‌ವೇರ್ ನೀತಿ 2011 ಪ್ರಕಟಿಸಲಾಗಿದ್ದು, ಈ ನೀತಿಯನ್ವಯ ಅರ್ಹವುಳ್ಳ ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ದರ್ಜೆಯ, ದೊಡ್ಡ ಮತ್ತು ಬೃಹತ್ ಎಲೆಕ್ಟ್ರಾನಿಕ್ಸ್ ಹಾರ್ಡ್‌ವೇರ್ ಉದ್ದಿಮೆಗಳಿಗೆ ಉತ್ತೇಜನ ನೀಡುವ ದೃಷ್ಟಿಯಿಂದ ಕರ್ನಾಟಕ ಮುದ್ರಾಂಕ ಕಾಯ್ದೆ 1957 ರ (34ನೇ ಕರ್ನಾಟಕ ಕಾಯ್ದೆ) ಕಲಂ 9(1)(ಎ) ರಲ್ಲಿ ಹಾಗೂ ನೋಂದಣಿ ಕಾಯ್ದೆ 1908 ರ (ಕೇಂದ್ರೀಯ ಕಾಯ್ದೆ 16) ಕಲಂ 78 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎಲೆಕ್ಟ್ರಾನಿಕ್ಸ್ ಹಾರ್ಡ್‌ವೇರ್ ನೀತಿ 2011 ರಲ್ಲಿ ನಿರ್ಧಿಷ್ಟಪಡಿಸಿದಂತೆ ಅನುಬಂಧ-1 ರಲ್ಲಿರುವ ವಲಯ-1, 2 ಮತ್ತು 3 ರಲ್ಲಿ ಸ್ಥಾಪಿಸಲಾಗುವ ಉದ್ದಿಮೆಗಳಿಗೆ ಈ ಕೆಳಕಂಡ ಮುದ್ರಾಂಕ ಶುಲ್ಕದಲ್ಲಿ ವಿನಾಯಿತಿ ಮತ್ತು ನೋಂದಣಿ ಶುಲ್ಕದಲ್ಲಿ ರಿಯಾಯಿತಿ ನೀಡಿ ಆದೇಶಿಸಿದೆ.

ಅ) ರಾಜ್ಯ ಸರ್ಕಾರ ಅಥವಾ ರಾಜ್ಯ ಆರ್ಥಿಕ ನಿಗಮಗಳು, ಕೈಗಾರಿಕೆ ಹಣ ಹೂಡಿಕೆ ಅಭಿವೃದ್ಧಿ ನಿಗಮ, ರಾಷ್ಟ್ರ ಮಟ್ಟದ ಆರ್ಥಿಕ ಸಂಸ್ಥೆಗಳು, ವಾಣಿಜ್ಯ ಬ್ಯಾಂಕುಗಳು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು, ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಖಾದಿ ಮತ್ತು ಗ್ರಾಮೋದ್ಯೋಗ ಕಮೀಷನ್, ಕರ್ನಾಟಕ ಪರಿಶಿಷ್ಟ ಜಾತಿ/ಪಂಗಡಗಳ ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯದ ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ ಮತ್ತು ಸರ್ಕಾರದಿಂದ ಕಾಲಕಾಲಕ್ಕೆ ಅಧಿಸೂಚನೆ ಮೂಲಕ ನಿಗಧಿಪಡಿಸುವ ಸಂಸ್ಥೆಗಳಿಂದ ಅವಧಿ ಸಾಲ ಪಡೆಯಲು ಮಾಡಿಕೊಡುವ ಸಾಲ ಕರಾರು, ಕ್ರೆಡಿಟ್ ಡೀಡ್, ಅಡಮಾನ ಪತ್ರಗಳಿಗೆ ಮತ್ತು

ಆ) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಕರ್ನಾಟಕ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ, ಕರ್ನಾಟಕ ವಿದ್ಯುನ್ಮಾನ ಅಭಿವೃದ್ಧಿ ನಿಗಮ, ಕರ್ನಾಟಕ ಕೈಗಾರಿಕಾ ಬಂಡವಾಳ ಹೂಡಿಕೆ ಮತ್ತು ಅಭಿವೃದ್ಧಿ ನಿಗಮ, ಕೈಗಾರಿಕಾ ವಸಾಹತುಗಳ ಜೊತೆ ಕೈಗಾರಿಕಾ ನಿವೇಶನ, ಷೆಡ್ಡುಗಳು, ಕೈಗಾರಿಕಾ ಕಟ್ಟಡವನ್ನು ಪಡೆಯಲು ಉದ್ದಿಮೆಗಳು ಮಾಡಿಕೊಡುವ ಗುತ್ತಿಗೆ ಪತ್ರ, ಗುತ್ತಿಗೆ ಹಾಗೂ ಕ್ರಯಪತ್ರ, ಶುದ್ಧಕ್ರಯಪತ್ರ ದಸ್ತಾವೇಜುಗಳಿಗೆ ಮತ್ತು

ಇ) ಕರ್ನಾಟಕ ಭೂ ಸುಧಾರಣೆ ಕಾಯಿದೆ, 1961 ರ ಸೆಕ್ಷನ್ 109 ರ ನಿಯಮದ ಪ್ರಕಾರ ಖರೀದಿಸುವ ಜಮೀನಿಗೆ ಮತ್ತು **SHLCC/SLSWCC/DLSWCC** ಗಳಿಂದ ಅನುಮೋದಿತವಾದ ಯೋಜನೆಗಳಿಗೆ ಕೈಗಾರಿಕೋದ್ದೇಶಗಳಿಗೆ ಪರಿವರ್ತಿತವಾದ ಜಮೀನನ್ನು ಖರೀದಿಸಲು ಮತ್ತು ಭೂ ಮಾಲೀಕರಿಗೆ ಭೂ ಸ್ವಾಧೀನ ಪಡಿಸಿಕೊಂಡಿದ್ದಕ್ಕೆ ಪರಿಹಾರವಾಗಿ ಕೆ.ಐ.ಎ.ಡಿ.ಬಿ ಯಿಂದ ಜಮೀನು ವರ್ಗಾಯಿಸುವ ಪತ್ರಗಳಿಗೆ

| ವಲಯ | ಮುದ್ರಾಂಕ ಶುಲ್ಕದಲ್ಲಿ ವಿನಾಯಿತಿ | ನೋಂದಣಿ ಶುಲ್ಕದಲ್ಲಿ ರಿಯಾಯಿತಿ |
|---|---|---|
| 1 ಮತ್ತು 2 | ಶೇ. 100 ರಷ್ಟು | ಪ್ರತಿ ರೂ. 1000/- ಮೌಲ್ಯಕ್ಕೆ ರೂ. 1 ರಂತೆ ಶುಲ್ಕ ವಿಧಿಸುವುದು |
| 3 | ಶೇ. 75 ರಷ್ಟು | ಪ್ರತಿ ರೂ. 1000/- ಮೌಲ್ಯಕ್ಕೆ ರೂ. 1 ರಂತೆ ಶುಲ್ಕ ವಿಧಿಸುವುದು |
| 4 | ಯಾವುದೇ ವಿನಾಯ್ತಿ ಇಲ್ಲ | ಯಾವುದೇ ರಿಯಾಯ್ತಿ ಇಲ್ಲ |

2. ಮುದ್ರಾಂಕ ಮತ್ತು ನೋಂದಣಿ ಶುಲ್ಕ ವಿನಾಯಿತಿ/ರಿಯಾಯಿತಿ ಪಡೆಯಲು ಅನುಬಂಧ-2 ಹಾಗೂ 3ರಲ್ಲಿ ನಿಗಧಿಪಡಿಸಿರುವಂತೆ **ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಅಧಿಕಾರಿಗಳಿಂದ** ದೃಢೀಕರಿಸಲ್ಪಟ್ಟ ಪ್ರಪತ್ರವನ್ನು ದಸ್ತಾವೇಜು ನೋಂದಣಿ ಸಮಯದಲ್ಲಿ ಒದಗಿಸುವುದು. ಈ ಪ್ರಪತ್ರದಲ್ಲಿ ಪ್ರಮಾಣೀಕರಿಸಿದ ಮಾಹಿತಿಯ ಆಧಾರದ ಮೇಲೆ ಮಾತ್ರ ಮುದ್ರಾಂಕ ಶುಲ್ಕ/ನೋಂದಣಿ ಶುಲ್ಕ ರಿಯಾಯಿತಿ ನೀಡುವ ಬಗ್ಗೆ ಪರಿಶೀಲಿಸಿ ದಸ್ತಾವೇಜುಗಳನ್ನು ನೋಂದಣಿ ಮಾಡತಕ್ಕದ್ದು.

3. ಕೈಗಾರಿಕಾ ನಿವೇಶನ, ಷೆಡ್ಡುಗಳು, ಕೈಗಾರಿಕಾ ಕಟ್ಟಡಗಳು ಮೊದಲಾದವುಗಳ ಲೀಸ್-ಕಂ-ಸೇಲ್ ಕರಾರಿನ ಅವಧಿ ಮುಗಿದ ಬಳಿಕ ಮಾಡಿಕೊಳ್ಳಲಾಗುವ ಅಂತಿಮ ಕ್ರಯಪತ್ರಕ್ಕೆ ಈ ಹಿಂದೆ ಲೀಸ್ ಕಂ ಸೇಲ್ ಡೀಡ್ ಮಾಡಿಕೊಂಡಾಗ ಚಾಲ್ತಿಯಲ್ಲಿದ್ದ ಕೈಗಾರಿಕಾ ನೀತಿಯ ಪ್ರಕಾರ ನಿಗಧಿಪಡಿಸಿದ್ದ ದರದಂತೆ ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕದ ರಿಯಾಯಿತಿ ನೀಡತಕ್ಕದ್ದು.

4. ಈ ವಿನಾಯಿತಿ/ರಿಯಾಯಿತಿಯು ಅಧಿಸೂಚನೆಯ ದಿನಾಂಕದಿಂದ **28–01–2016** ರವರೆಗೆ ಅಥವಾ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

## ಅನುಬಂಧ–2

## ಕರ್ನಾಟಕ ಸೆಮಿ ಕಂಡಕ್ಟರ್ 2010 ರ ನೀತಿಯನ್ವಯ ಸಾಲದ ಪತ್ರಗಳ ಬಗ್ಗೆ ನೋಂದಣಿ ಶುಲ್ಕ ಮತ್ತು ಮುದ್ರಾಂಕ ಶುಲ್ಕ ರಿಯಾಯಿತಿ ದೃಢೀಕರಣ ಪತ್ರದ ನಮೂನೆ

## ಪ್ರಮಾಣ ಪತ್ರ

ವಿಷಯ: ............................ ರವರಿಗೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ರಿಯಾಯಿತಿ ದೃಢೀಕರಣ ಪತ್ರ ನೀಡುವ ಬಗ್ಗೆ.

ಉಲ್ಲೇಖ: 1. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 10 ಪಿಆರ್‌ಎಂ 2008, ಬೆಂಗಳೂರು, ದಿನಾಂಕ: 25/02/2010

2. ಕಂದಾಯ ಇಲಾಖೆ ಅಧಿಸೂಚನೆ ಸಂಖ್ಯೆ: ಕಂಇ/______/ಮುನೋಮು/______, ದಿನಾಂಕ: ______________

3. ಮೆ: ................................ರವರ ಪತ್ರ ಸಂಖ್ಯೆ: .............................................. ದಿನಾಂಕ: ............................

*************

(vi) ಮೆ: ..................................ನ ಮಾಲೀಕರಾದ/ಪಾಲುದಾರರಾದ/ವ್ಯವಸ್ಥಾಪಕ ನಿರ್ದೇಶಕರಾದ/ನಿರ್ದೇಶಕರಾದ ಶ್ರೀ ................................. ರವರು ಪ್ರತಿನಿಧಿಸುತ್ತಿದ್ದು, ಈ ಘಟಕವು ಸೆಮಿ ಕಂಡಕ್ಟರ್ ಉದ್ದಿಮೆಯಾಗಿದ್ದು/ವಿಸ್ತರಣೆ/ ನವೀಕರಣ/ವೈವಿಧ್ದೀಕರಣ ಕೈಗೊಂಡಿದ್ದು, ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ /ಭಾರತ ಸರ್ಕಾರದ ಪತ್ರ ಸಂಖ್ಯೆ: ................................. ದಿನಾಂಕ: ................... ರನ್ವಯ...... ಅನುಮತಿ/ಪರವಾನಗಿ ಪಡೆದಿರುತ್ತದೆ.

(vii) ಈ ಘಟಕವು ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 10 ಪಿಆರ್‌ಎಂ 2008, ಬೆಂಗಳೂರು ದಿನಾಂಕ: 25/02/2010ರ ಪ್ರಕಾರ ಸೆಮಿ ಕಂಡಕ್ಟರ್ ಉದ್ದಿಮೆಗಳಿಗೆ ನೀಡಲಾಗುವ ಉತ್ತೇಜನಗಳು ಮತ್ತು ರಿಯಾಯಿತಿಗಳಂತೆ ವಲಯ .......................... ರಲ್ಲಿ ಸ್ಥಾಪಿತಗೊಂಡಿದ್ದು, ಮೆಗಾ ಯೋಜನೆ /ದೊಡ್ಡ/ಮಧ್ಯಮ/ಸಣ್ಣ/ಸೂಕ್ಷ್ಮ ಉದ್ಯಮ ಎಂದು ದೃಢೀಕರಿಸಿದೆ.

(viii) ಈ ಉದ್ದಿಮೆಗೆ ................................(ಸಾಲ ನೀಡುವ ಬ್ಯಾಂಕ್)/ ಸಂಸ್ಥೆ ವಿವರ ನೀಡುವುದು) ರವರು ರೂ. ........ ಅವಧಿ ಸಾಲವನ್ನು ರೂ. ............................ ಯೋಜನಾ ವೆಚ್ಚದಲ್ಲಿ .................................. ಮಂಜೂರು ಮಾಡಿರುತ್ತದೆ.

(ix) ಈ ಘಟಕದ ಪ್ರಸ್ತಾಪಿತ ಯೋಜನೆಯನ್ನು **DLSWCC/SLSWCC/SHLCC** ರವರು ದಿ: ................... ರಂದು ನಡೆದ ಇವರ .......................ಸಭೆಯಲ್ಲಿ ಅನುಮೋದಿಸಿದ್ದಾರೆ.

(x) ಈ ಉದ್ದಿಮೆಯು ಅವಧಿ ಸಾಲ ಪಡೆಯುವ ಹಿನ್ನಲೆಯಲ್ಲಿ ಸಾಲ ಕರಾರು/ಕ್ರೆಡಿಟ್ ಡೀಡ್/ಅಡಮಾನ/ಬಾಡಿಗೆ ಪತ್ರಗಳ ಮುದ್ರಾಂಕ ಶುಲ್ಕದಲ್ಲಿ ಶೇ. 100/75 ರಷ್ಟು ರಿಯಾಯಿತಿ ಪಡೆಯಲು ಹಾಗೂ ನೋಂದಣಿ ಶುಲ್ಕದಲ್ಲಿ ದಸ್ತಾವೇಜು ಮೌಲ್ಯದ ಪ್ರತಿ ರೂ. 1000/– ಕ್ಕೆ ರೂ. 1/– ನ್ನು ಮಾತ್ರ ಪಾವತಿಸಲು ಅರ್ಹರಿರುವುದಾಗಿ ದೃಢೀಕರಿಸಿದೆ.

.......................................... **ಅಧಿಕಾರಿ**

**ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ** ______________

**ಅನುಬಂಧ-3**

**ಕರ್ನಾಟಕ ಸೆಮಿ ಕಂಡಕ್ಟರ್ 2010 ರ ನೀತಿಯನ್ವಯ ಗುತ್ತಿಗೆ, ಗುತ್ತಿಗೆ ಹಾಗೂ ಕ್ರಯ, ಕ್ರಯಪತ್ರಗಳ ಬಗ್ಗೆ ನೋಂದಣಿ ಶುಲ್ಕ ಮತ್ತು ಮುದ್ರಾಂಕ ಶುಲ್ಕ ರಿಯಾಯಿತಿ ದೃಢೀಕರಣ ಪತ್ರದ ನಮೂನೆ**

**ಪ್ರಮಾಣ ಪತ್ರ**

ವಿಷಯ: ............................ ರವರಿಗೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ರಿಯಾಯಿತಿ ದೃಢೀಕರಣ ಪತ್ರ ನೀಡುವ ಬಗ್ಗೆ.

ಉಲ್ಲೇಖ: 1. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 10 ಪಿಆರ್ಎಂ 2008, ಬೆಂಗಳೂರು, ದಿನಾಂಕ: 25/02/2010

2. ಕಂದಾಯ ಇಲಾಖೆ ಅಧಿಸೂಚನೆ ಸಂಖ್ಯೆ: ಕಂಇ/______/ಮುನೋಮು/______, ದಿನಾಂಕ: ______________

3. ಮೆ: ................................ರವರ ಪತ್ರ ಸಂಖ್ಯೆ: ..............................................., ದಿನಾಂಕ: ............................

4. ........................... ರವರು ಸದರಿ ಘಟಕಕ್ಕೆ ನೀಡಿರುವ ಅಲಾಟ್‌ಮೆಂಟ್ ಪತ್ರ ಸಂಖ್ಯೆ: .................................... ದಿನಾಂಕ: ................................

*************

(vi) ಮೆ: ..................................ನ ಮಾಲೀಕರಾದ/ಪಾಲುದಾರರಾದ/ವ್ಯವಸ್ಥಾಪಕ ನಿರ್ದೇಶಕರಾದ/ನಿರ್ದೇಶಕರಾದ ಶ್ರೀ .................................. ರವರು ಪ್ರತಿನಿಧಿಸುತ್ತಿದ್ದು, ಈ ಘಟಕವು ಸೆಮಿ ಕಂಡಕ್ಟರ್ ಘಟಕವಾಗಿದ್ದು, ವಿಸ್ತರಣೆ/ ನವೀಕರಣ/ವೈವಿಧ್ದೀಕರಣ ಕೈಗೊಂಡಿದ್ದು, ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ/ಭಾರತ ಸರ್ಕಾರದ ಪತ್ರ ಸಂಖ್ಯೆ: .................................. ದಿನಾಂಕ: .................... ರನ್ವಯ...... ಅನುಮತಿ/ಪರವಾನಗಿ ಪಡೆದಿರುತ್ತದೆ.

(vii) ಈ ಘಟಕವು ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 10 ಪಿಆರ್ಎಂ 2008, ಬೆಂಗಳೂರು ದಿನಾಂಕ: 25/02/2010 ರನ್ವಯ ಸೆಮಿ ಕಂಡಕ್ಟರ್ ಉದ್ದಿಮೆಗಳಿಗೆ ನೀಡಲಾಗುವ ಉತ್ತೇಜನಗಳು ಮತ್ತು ರಿಯಾಯಿತಿಗಳಂತೆ ವಲಯ .......................... ರಲ್ಲಿ ಸ್ಥಾಪಿತಗೊಂಡಿದ್ದು, ಮೆಗಾ ಯೋಜನೆ/ದೊಡ್ಡ/ಮಧ್ಯಮ/ಸಣ್ಣ/ಸೂಕ್ಷ್ಮ ಉದ್ಯಮ ಎಂದು ದೃಢೀಕರಿಸಿದೆ.

(viii) ಈ ಉದ್ದಿಮೆಗೆ ಕೆಐಎಡಿಬಿ/ಕೆಎಸ್ಎಸ್ಐಡಿಸಿ/ಕಿಯೋನಿಕ್ಸ್/ಕೆಎಸ್ಐಐಡಿಸಿ/ಇಂಡಸ್ಟ್ರಿಯಲ್ ಕೋ ಆಪರೇಟೀವ್ ಸೊಸೈಟಿ/ಅನುಮೋದಿತ ಕೈಗಾರಿಕಾ ಪ್ರದೇಶದವರಿಂದ ...............................................ಚ.ಮೀ//......................... ಎಕರೆ ಮಳಿಗೆ/ನಿವೇಶನ/ಟೆನಮೆಂಟನ್ನು ........................ ಹಂಚಿಕೆ ಮಾಡಿರುತ್ತದೆ ಅಥವಾ ಘಟಕವು ಕೆಎಲ್ಆರ್ ಕಾಯ್ದೆ ನಿಯಮ 109 ರಡಿ ............ ಎಕರೆ ಜಮೀನು ಖರೀದಿಸಿರುತ್ತದೆ ಅಥವಾ ............. ರಿಂದ ................ ಎಕರೆ ಕೈಗಾರಿಕೋದ್ದೇಶಗಳಿಗೆ ಪರಿವರ್ತಿತ ಭೂಮಿಯನ್ನು **DLSWCC/SLSWCC/SHLCC** ಅನುಮೋದನೆಯಂತೆ ಖರೀದಿಸಿರುತ್ತದೆ.

(ix) ಈ ಉದ್ದಿಮೆಯ ಪ್ರಸ್ತಾಪಿತ ಯೋಜನೆಯನ್ನು **DLSWCC/SLSWCC/SHLCC** ರವರು ದಿ: .................... ರಂದು ನಡೆದ.......................ಸಭೆಯಲ್ಲಿ ಅನುಮೋದಿಸಿದ್ದಾರೆ.

(x) ಈ ಮೇಲ್ಕಂಡ ಕ್ರ.ಸಂ. (3) ರಂತೆ ಈ ಉದ್ದಿಮೆಗೆ ನಿವೇಶನ/ಮಳಿಗೆ/ಟೆನಮೆಂಟ್‌ನ ಲೀಸ್-ಡೀಡ್/ಲೀಸ್ ಕಂ ಸೇಲ್ ಡೀಡ್/ಶುದ್ಧಕ್ರಯ ಪತ್ರ ಪಡೆಯುವ ಹಿನ್ನಲೆಯಲ್ಲಿ ಮುದ್ರಾಂಕ ಶುಲ್ಕದಲ್ಲಿ ಶೇ. 100/75 ರಷ್ಟು ರಿಯಾಯಿತಿ ಪಡೆಯಲು ಹಾಗೂ ನೋಂದಣಿ ಶುಲ್ಕದಲ್ಲಿ ದಸ್ತಾವೇಜು ಮೌಲ್ಯದ ಪ್ರತಿ ರೂ. 1000/- ಕ್ಕೆ ರೂ. 1/- ನ್ನು ಮಾತ್ರ ಪಾವತಿಸಲು ಅರ್ಹರಿರುವುದಾಗಿ ದೃಢೀಕರಿಸಿದೆ.

.......................................... **ಅಧಿಕಾರಿ**

**ಕರ್ನಾಟಕ ಮಾಹಿತಿ ತಂತ್ರಜ್ಞಾನ ಮತ್ತು**

**ಜೈವಿಕ ತಂತ್ರಜ್ಞಾನ ಇಲಾಖೆ ______________**

**ಪಿ.ಆರ್. 461**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರ ಕಚೇರಿ ತುಮಕೂರು ಜಿಲ್ಲೆ ತುಮಕೂರು ಜಿಲ್ಲೆ ತುಮಕೂರು 2 ನೇ ಮಹಡಿ ಮಿನಿ ವಿಧಾನ ಸೌಧ ತುಮಕೂರು ಇವರ ಕಾರ್ಯಲಯಾದ ನಡವಳಿಕೆಗಳು

**ವಿಷಯ :** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ (ನಿ) ಸಂಕಾಪುರ ಮಧುಗಿರಿ ತಾಲ್ಲೂಕು ಈ ಸಂಘವನ್ನು ಋಣಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರದ ಸಂಖ್ಯೆ ಸನಿ33/ಎಂ.ಕೆ.ಟಿ/ಸ್ಥಗಿತ /130/2011-12 ದಿನಾಂಕ: 23-2-2012.

**ಪ್ರಸ್ತಾವನೆ :~**

ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ (ನಿ)ಸಂಕಾಪುರ ಮಧುಗಿರಿ ತಾಲ್ಲೂಕು ಈ ಸಹಕಾರ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇದ್ದು ಸಹಾಯಕ ನಿಬಂಧಕರು ಮದುಗಿರಿ ಉಪವಿಭಾಗ ಮಧುಗಿರಿ ಇವರ ಕಚೇರಿಯಲ್ಲಿ ನೊಂದಣಿಯಾಗಿದ್ದು ಸನಿ33/ಎಂ.ಕೆ.ಟಿ/ನೊಂದಾಣಿ/ ಜೆ.ಓ.ಕ್ಯೂ/38217/ 2009-10 ದಿನಾಂಕ:30-9-2009 ರಲ್ಲಿ ನೊಂದಯಿಸಲ್ಪಟ್ಟಿದ್ದು ಕಾರ್ಯಸ್ಥಗಿತವಾಗಿ ಮುಂದುವರಿಯುತ್ತಿದ್ದು ಸಂಘದ ಯಾವೊಬ್ಬ ಸದಸ್ಯರು ಸಂಘದ ಕಾರ್ಯರಂಭ ಮಾಡಲು ಆಸಕ್ತಿ ತೋರದಿರುವುದರಿಂದ ಹಾಗೂ ಆಡಳಿತ ಮಂಡಳಿ ಚುನಾವಣೆ ನಡೆದು ಆಡಳಿತ ಮಂಡಳಿ ರಚನೆಯಾಗಿ ಸಂಘದ ಉಪನಿಯಮದ ರೀತ್ಯಾ ಕಾರ್ಯಚಟುವಟಿಕೆಗಳನ್ನು ಪ್ರಾರಂಭಿಸಿರುವುದಿಲ್ಲ ಇದು ಕೇವಲ ನಾಮ ಮಾತ್ರ ಸಹಕಾರ ಸಂಘವಾಗಿರುವುದರಿಂದ ಇದನ್ನು ಋಣಸಮಾಪಗೊಳಿಸಿ ಸಮಾಪನಾಧಿಕಾರಿಯನ್ನು ನೇಮಿಸಿ ಆದೇಶಿಸಬೇಕೆಂದು ಉಲ್ಲೇಖಿತ ಪತ್ರದಲ್ಲಿ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರು ಕೋರಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ನೀಡಿದೆ.

**: ಆದೇಶ :**

**ನಂ ಡಿಆರ್‌ಟಿ/ಎಲ್ ಕ್ಯೂಡಿ/ಸಿಆರ್130/2011-12, ದಿನಾಂಕ: 29-2-2012**

ಆರ್ ಲೋಕೇಶ್ ಕೆ.ಸಿಎಸ್ ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಜಿಲ್ಲೆ ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72 (2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅದಿಸೂಚನೆ ಸಂಖ್ಯೆ ಸಿ.ಓ/139/ಸಿ ಎಲ್.ಎಂ/ 2010 ದಿನಾಂಕ: 17-2-2011 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ (ನಿ) ಸಂಕಾಪುರ ಮಧುಗಿರಿ ತಾಲ್ಲೂಕು ತುಮಕೂರು ಜಿಲ್ಲೆ ಇದನ್ನು ಸಮಾಪನೆಗೊಳಿಸಿ ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ಮದುಗಿರಿ ಇವರನ್ನು ಋಣಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ಋಣಸಮಾಪನಾಧಿಕಾರಿಗಳು ಸಂಘದ ಪೂರ್ಣ ಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ ಅನುಮೋದನೆ ಪಡೆದು ಆದ್ಯತಾ ಮೇರೆಗೆ ವಿಲೇವಾರಿಮಾಡಿ ಸಂಘದ ನೊಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನ ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 29-2-2012 ರಂದು ನೀಡಿರುತ್ತೇನೆ.

**ಸಹಕಾರ ಸಂಘಗಳ ಉಪ ನಿಬಂಧಕರು**
**ತುಮಕೂರು ಜಿಲ್ಲೆ ತುಮಕೂರು**

ಪಿ.ಆರ್. **394**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರ ಕಚೇರಿ ತುಮಕೂರು ಜಿಲ್ಲೆ ತುಮಕೂರು ಜಿಲ್ಲೆ ತುಮಕೂರು 2 ನೇ ಮಹಡಿ ಮಿನಿ ವಿಧಾನ ಸೌಧ ತುಮಕೂರು ಇವರ ಕಾರ್ಯಲಯಾದ ನಡವಳಿಕೆಗಳು

**ವಿಷಯ :** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ (ನಿ) ಸೋಗೇನಹಳ್ಳಿ ಮಧುಗಿರಿ ತಾಲ್ಲೂಕು ಈ ಸಂಘವನ್ನು ಋಣಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರದ ಸಂಖ್ಯೆ ಸನಿ33/ಎಂ.ಕೆ.ಟಿ/ಸ್ಥಗಿತ /138/2011-12 ದಿನಾಂಕ: 23-2-2012.

ಪ್ರಸ್ತಾವನೆ :~

ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ (ನಿ) ಸೋಗೇನಹಳ್ಳಿ ಮಧುಗಿರಿ ತಾಲ್ಲೂಕು ಈ ಸಹಕಾರ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇದ್ದು ಸಹಾಯಕ ನಿಬಂಧಕರು ಮದುಗಿರಿ ಇವರ ಕಚೇರಿಯಲ್ಲಿ ನೊಂದಣಿ ಸಂಖ್ಯೆ ಸನಿ33/ಎಂ.ಕೆ.ಟಿ/ ಜೆ.ಓ.ಕ್ಯೂ/ 37031/ 2008–09 ದಿನಾಂಕ:31–5–2008 ರಲ್ಲಿ ನೊಂದಯಿಸಲ್ಪಟ್ಟಿದ್ದು ಕಾರ್ಯಸ್ಥಗಿತವಾಗಿ ಮುಂದುವರಿಯುತ್ತಿದ್ದು ಸಂಘದ ಯಾವೊಬ್ಬ ಸದಸ್ಯರು ಸಂಘದ ಕಾರ್ಯರಂಭ ಮಾಡಲು ಆಸಕ್ತಿ ತೋರದಿರುವುದರಿಂದ ಹಾಗೂ ಆಡಳಿತ ಮಂಡಳಿ ಚುನಾವಣೆ ನಡೆದು ಆಡಳಿತ ಮಂಡಳಿ ರಚನೆಯಾಗಿ ಸಂಘದ ಉಪನಿಯಮದ ರೀತ್ಯಾ ಕಾರ್ಯಚಟುವಟಿಕೆಗಳನ್ನು ಪ್ರಾರಂಭಿಸಿರುವುದಿಲ್ಲ ಇದು ಕೇವಲ ನಾಮ ಮಾತ್ರ ಸಹಕಾರ ಸಂಘವಾಗಿದ್ದು ಇದನ್ನು ಋಣಸಮಾಪಗೊಳಿಸಿ ಸಮಾಪನಾಧಿಕಾರಿಯನ್ನು ನೇಮಿಸಿ ಆದೇಶಿಸಬೇಕೆಂದು ಉಲ್ಲೇಖಿತ ಪತ್ರದಲ್ಲಿ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರು ಕೋರಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ನೀಡಿದೆ.

**: ಆದೇಶ :**

**ನಂ ಡಿಆರ್‌ಟಿ/ಎಲ್ ಕ್ಯೂಡಿ/ಸಿಆರ್138/2011–12, ದಿನಾಂಕ: 29–2–2012**

ಆರ್ ಲೋಕೇಶ್ ಕೆ.ಸಿಎಸ್ ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಜಿಲ್ಲೆ ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72 (2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅದಿಸೂಚನೆ ಸಂಖ್ಯೆ ಸಿ.ಓ/139/ಸಿ ಎಲ್.ಎಂ/ 2010 ದಿನಾಂಕ: 17–2–2011 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ (ನಿ) ಸೋಗೇನಹಳ್ಳಿ ಮಧುಗಿರಿ ತಾಲ್ಲೂಕು ತುಮಕೂರು ಜಿಲ್ಲೆ ಇದನ್ನು ಸಮಾಪನೆಗೊಳಿಸಿ ಮಾರಾಟಾಧಿಕಾರಿ ಸಹಾಯಕ ನಿಬಂಧಕರ ಕಛೇರಿ ಮದುಗಿರಿ ಋಣಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ಋಣಸಮಾಪನಾಧಿಕಾರಿಗಳು ಸಂಘದ ಪೂರ್ಣ ಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ ಅನುಮೋದನೆ ಪಡೆದು ಆದ್ಯತಾ ಮೇರೆಗೆ ವಿಲೇವಾರಿಮಾಡಿ ಸಂಘದ ನೊಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನ ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 29–2–2012 ನೀಡಿರುತ್ತೇನೆ.

**ಸಹಕಾರ ಸಂಘಗಳ ಉಪ ನಿಬಂಧಕರು**
**ತುಮಕೂರು ಜಿಲ್ಲೆ ತುಮಕೂರು**

**ಪಿ.ಆರ್. 393**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು ಮಿನಿ ವಿಧಾನ ಸೌಧ ತುಮಕೂರು ಜಿಲ್ಲೆ ತುಮಕೂರು ಇವರ ಕಾರ್ಯಲಯದ ನಡವಳಿಕೆಗಳು

**ವಿಷಯ :** ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ(ನಿ) ನೇರಲಗುಡ್ಡ ಶಿರಾ ತಾಲ್ಲೂಕು ಇದರ ನೊಂದಣಿರದ್ದು ಪಡಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರ ಸಂಖ್ಯೆ ಸನಿಉ33/ಸಮಾಪನೆ ನೊಂ.ರ/137/2011–12, ದಿನಾಂಕ:29–2–2012

2) ಈ ಕಚೇರಿ ಆದೇಶ ಸಂಖ್ಯೆ ಡಿಆರ್‌ಟಿ/ಎಲ್‌ಕ್ಯೂಡಿ/2011–12 ದಿನಾಂಕ: 9–8–2011

3) ಸಂಘದ ಋಣಸಮಾಪನಾಧಿಕಾರಿಗಳು ಹಾಗೂ ಸಹಕಾರ ಅಬಿವೃದ್ದಿ ಅಧಿಕಾರಿ ಶಿರಾರವರ ಪತ್ರ ಸಂಖ್ಯೆ ಸ.ಅ.ಅ.ಶಿರಾ/ನೊಂ.ರ 2011–12 ದಿನಾಂಕ: 28–2–2012.

ಪ್ರಸ್ತಾವನೆ:~

ಹಾಲು ಉತ್ಪಾದಕರ ಸಹಕಾರ ಸಂಘ (ನಿ) ನೇರಲಗುಡ್ಡ ಶಿರಾ ತಾಲ್ಲೂಕು ಈ ಸಂಘವು ಸ್ಥಗಿತಗೊಂಡ ಕಾರಣ ಸಂಘವನ್ನು ಸಮಾಪನೆಗೊಳಿಸಿವಂತೆ ಮಧುಗಿರಿ ಉಪ ವಿಭಾಗದ ಸಹಾಯಕ ನಿಬಂಧಕರು ಈ ಕಛೇರಿಗೆ ಪ್ರಸ್ತಾವೆ ಸಲ್ಲಿಸಲಾಗಿದ್ದ ಹಿನ್ನೆಲೆಯಲ್ಲಿ ಉಲ್ಲೇಖ (2) ರ ಈ ಕಛೇರಿ ಆದೇಶ ರೀತ್ಯಾ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ದಿ ಅಧಿಕಾರಿ ಶಿರಾ ಇವರನ್ನು ಸಮಾಪನೆಗೊಳಿಸಲಾಗಿತ್ತು ಅಲ್ಲದೆ ಸಂಘದ ಆಸ್ತಿ ಜವಾಬ್ದಾರಿ ವಿಲೇವಾರಿಗೆ ಅದ್ಯತಾ ಪಟ್ಟಿ ಅನುಮೋದನೆ ಪಡೆದುಕೊಂಡು ಆಸ್ತಿ ಜವಾಬ್ದಾರಿ ತೀರುವಳಿ ಮಾಡಿ ನೊಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸುವಂತೆ ಆದೇಶಿಸಲಾಗಿತ್ತು.

ಋಣ ಸಮಾಪನಾಧಿಕಾರಿಗಳು ಆಸ್ತಿ ಜವಾಬ್ದಾರಿ ವಿಲೇವಾರಿ ಮಾಡಿ ನೊಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರಿಗೆ ಸಲ್ಲಿಸಿದ್ದು ಉಲ್ಲೇಖ (1) ರಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ರವರು ಶಿಫಾರಸ್ಸು ಮಾಡಿರುವ ಪ್ರಯುಕ್ತ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**~:ಆದೇಶ:~**

**ಸಂಖ್ಯೆ ಡಿಆರ್‌ಟಿ//ಎಲ್‌ಕ್ಯೂಡಿ/2011-12, ದಿನಾಂಕ: 9-3-2012**

ಶ್ರೀ ಆರ್.ಲೋಕೇಶ್ ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಜಿಲ್ಲೆ ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ಹಾಗೂ ಸರ್ಕಾರದ ಅದಿಸೂಚನೆ ಸಂಖ್ಯೆ ಸಿ.ಓ/139/ಸಿ.ಎಂ.ಎಮ್2010 ದಿನಾಂಕ:17-2-2011 ರಲ್ಲಿ ದತ್ತವಾಗಿರುವ ಅದಿಕಾರವನ್ನು ಚಲಾಯಿಸಿ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ನೇರಲಗುಡ್ಡ ಶಿರಾ ತಾಲ್ಲೂಕು ಇದರ ನೊಂದಣಿ ಸಂಖ್ಯೆ ಎಆರ್‌ಎಂ,ಆರ್.ಜಿ.ಡಿ/9744/8485 ದಿನಾಂಕ: 30-3-1985 ನ್ನು ರದ್ದು ಪಡಿಸಿದೆ ಸಂಘವು ಅಸ್ಥಿತ್ವದಲ್ಲಿರುವುದಿಲ್ಲ.ಮತ್ತು ವಿಸರ್ಜನೆಗೊಂಡಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ: 9-3-2012 ರಂದು ನೀಡಿರುತ್ತೇನೆ.

**ಸಹಕಾರ ಸಂಘಗಳ ಉಪ ನಿಬಂಧಕರು**
**ತುಮಕೂರು ಜಿಲ್ಲೆ ತುಮಕೂರು**

**ಪಿ.ಆರ್. 436**

## ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ

**ದಾವಾ ಸಂಖ್ಯೆ: ಡಿಆರ್‌ಎಸ್/ಡಿಡಿಎಸ್/ಎಂಐಎಸ್‌ಸಿ/01/2011-12**

**ಅರ್ಜಿದಾರರು:**
ಶಿಕಾರಿಪುರ ತಾಲ್ಲೂಕು ಪ್ರಾಥಮಿಕ ಶಾಲಾ
ಶಿಕ್ಷಕರ ಪತ್ತು ಬೆಳೆಸುವ ಸಹಕಾರ ಸಂಘ ನಿ.,
ಶಿಕಾರಿಪುರ.
ಶಿಕಾರಿಪುರ ತಾ॥, ಶಿವಮೊಗ್ಗ ಜಿಲ್ಲೆ.
ದರ ಪರವಾಗಿ ಕಾರ್ಯದರ್ಶಿ.

**ವಿರುದ್ಧ**

**ಎದುರು ಅರ್ಜಿದಾರರು:**
ಹೆಚ್.ಡಿ. ದೇವಾನಂದ (ಪೌತಿ),
ಮೃತ ಕಾರ್ಯದರ್ಶಿ,
ಶಿಕಾರಿಪುರ ತಾಲ್ಲೂಕು ಪ್ರಾಥಮಿಕ
ಶಾಲಾ ಶಿಕ್ಷಕರ ಪತ್ತು ಬೆಳೆಸುವ
ಸಹಕಾರ ಸಂಘ ನಿ.,ಶಿಕಾರಿಪುರ.

**ಪೌತಿ ವಾರಸುದಾರರು:**

1) ಶ್ರೀಮತಿ ಶೈಲಜಾ(ಪತ್ನಿ), ಕೋಂ. ದಿ॥ ಹೆಚ್.ಡಿ. ದೇವಾನಂದ, ಬನಶಂಕರಿ ಬೀದಿ, ಈಸೂರು, ಶಿಕಾರಿಪುರ ತಾಲ್ಲೂಕು.
2) ಕುಮಾರ ರಾಕೇಶ್ ಹೆಚ್.ಡಿ.(ಮೈನರ್) ಬಿನ್ ಹೆಚ್.ಡಿ.ದೇವಾನಂದ, ವಯಸ್ಸು ಸುಮಾರು 15 ವರ್ಷಗಳು
3) ಕುಮಾರ ಹಿತೇಶ ಹೆಚ್.ಡಿ.(ಮೈನರ್) ಬಿನ್ ಹೆಚ್.ಡಿ.ದೇವಾನಂದ, ವಯಸ್ಸು ಸುಮಾರು 13 ವರ್ಷಗಳು

**ಮೈನರ್ ಗಾರ್ಡಿಯನ್**

ಶ್ರೀಮತಿ ಶೈಲಜಾ, ಕೋಂ. ದಿ:ಹೆಚ್.ಡಿ.ದೇವಾನಂದ,
ಬನಶಂಕರಿ ಬೀದಿ, ಈಸೂರು, ಶಿಕಾರಿಪುರ ತಾಲ್ಲೂಕು.

**-: ನೋಟೀಸ್ :-**

**(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತು ಆದೇಶ)**

**ಪ್ರಸ್ತಾವನೆ :-**

ಅರ್ಜಿದಾರ ಸಂಘ ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ಎದುರುಅರ್ಜಿದಾರರು, ಅರ್ಜಿದಾರ ಸಂಘದಲ್ಲಿ ದುರುಪಯೋಗಪಡಿಸಿಕೊಂಡಿರುವ ಮೊಬಲಗು ರೂ.12,57,583-00 ಗಳನ್ನು ಸಾಲಿಯಾನ ಶೇ.18ರ ಬಡ್ಡಿಯೊಂದಿಗೆ ವಸೂಲಾತಿಗಾಗಿ ಎದುರಿಯ ವಿರುದ್ದ ದಾವಾ ಅರ್ಜಿಯನ್ನು ದಾಖಲು ಮಾಡಿರುತ್ತಾರೆ. ಈ ದಾವಾ ಅರ್ಜಿಯನ್ನು ವಿಚಾರಣೆಗೆ ಕೈಗೆತ್ತಿಕೊಂಡು, ದಾವಾ ಅರ್ಜಿ ಸಂಖ್ಯೆ: ಡಿಆರ್‌ಎಸ್/ಡಿಡಿಎಸ್/ಎಂಐಎಸ್‌ಸಿ/01/2011-12 ಎಂದು ನಂಬರ್ ನೀಡಲಾಗಿದೆ. ಈ ದಾವಾ ಅರ್ಜಿಯೊಂದಿಗೆ ಅರ್ಜಿದಾರರು ಮಧ್ಯಂತರ ಅರ್ಜಿ ಸಲ್ಲಿಸಿ, ಕಲಂ 103ರನ್ವಯ ಅರ್ಜಿದಾರ ಸಂಘ, ಎದುರುದಾರರ ವಿರುದ್ದ ವಸೂಲಾತಿಗಾಗಿ ಕಾಯ್ದೆ ಕಲಂ 70 ರಡಿಯಲ್ಲಿ ಅರ್ಜಿದಾರ ಸಂಘದ ಪರವಾಗಿ ಡಿಕ್ರಿ ಕೋರಿ ಪ್ರಕರಣ ದಾಖಲಿಸಿದ್ದು, ಸದರೀ ಹಣವು ವಸೂಲಾತಿ ಆಗದಿರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ ಮೇಲ್ಕಂಡ ದಾವಾ

ಅರ್ಜಿಯಲ್ಲಿನ ಎದುರುದಾರರ ಸ್ಥಿರಾಸ್ತಿಯನ್ನು ದಾವಾ ಅರ್ಜಿಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಬಾರೆ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಲು ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಕ್ರಮವನ್ನು ಕೋರಿದ್ದಾರೆ, ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ತೀರ್ಪು ಪೂರ್ವ ಷರತ್ತುಬದ್ಧ ಜಪ್ತು ಆದೇಶದ ನೋಟಿಸನ್ನು ಹೊರಡಿಸಲಾಗಿದೆ.

**ಸಂ:ಡಿಆರ್‌ಎಸ್/ಎಬಿಎನ್/ಕಲಂ-103/2011-12, 1764, ದಿನಾಂಕ:18-02-2012**

**: ಆ ದೇ ಶ :**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಗಾಗಿ ಅಶೋಕ.ವೆಂ.ಮೊರಬ, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ.ಸಿಓ/139/ಸಿಎಲ್‌ಎಂ/2010 ಬೆಂಗಳೂರು ದಿನಾಂಕ:17-02-2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಈ ಆದೇಶದೊಂದಿಗೆ ಇರುವ ಅನುಸೂಚಿಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಮೇಲ್ಕಾಣಿಸಿದ ದಾವಾ ಅರ್ಜಿಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಅಲ್ಲದೇ, ಎದುರು ಅರ್ಜಿದಾರರು ತಮ್ಮ ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆಯನ್ನು ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಹೆಸರಿನಲ್ಲಿ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ, ಮುಖ್ಯ ಶಾಖೆ, ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ, ಈ ಬಗ್ಗೆ ರಶೀದಿ ಅಥವಾ ಬ್ಯಾಂಕ್‌ನ ಚಲನ್ನಿನ ಪ್ರತಿಯನ್ನು ದಿನಾಂಕ:19-03-2012 ರ ಒಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶದ ಅನುಸೂಚಿಯಲ್ಲಿರುವ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಷರತ್ತು ಪೂರ್ವಕ ಜಪ್ತು ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ**

| ಕ್ರ. ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಅಸೆಸ್‌ಮೆಂಟ್ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1 | ಶ್ರೀ ಹೆಚ್.ಡಿ.ದೇವಾನಂದ, ಬಿನ್ ಬೆನಕಪ್ಪ, | ಶಿಕಾರಿಪುರ ತಾಲ್ಲೂಕಿನ ಈಸೂರು ಗ್ರಾಮ | 414/415 | 15 ಅಡಿ X 138 ಅಡಿ ನಿವೇಶನದಲ್ಲಿ ಇರುವ ಆರ್‌ಸಿಸಿ ವಾಸದ ಮನೆ | ಆರ್‌ಸಿಸಿ ವಾಸದ ಮನೆ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ದಿನಾಂಕ:18-02-2012 ರಂದು ತೆರೆದ ನ್ಯಾಯಾಲಯದಲ್ಲಿ ನೀಡಿದೆ.

**ಅಶೋಕ.ವೆಂ.ಮೊರಬ,**
ಸಹಕಾರ ಸಂಘಗಳ ಉಪನಿಬಂಧಕರು,
ಶಿವಮೊಗ ಜಿಲ್ಲೆ, ಶಿವಮೊಗ್ಗ.

**ಪಿ.ಆರ್. 241**

## ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ

**ದಾವಾ ಸಂಖ್ಯೆ: ಡಿಆರ್‌ಎಸ್/ಡಿಡಿಎಸ್/ಎಂಐಎಸ್‌ಸಿ/01/2011-12/23**

**ಅರ್ಜಿದಾರರು:**
ಶಿಕಾರಿಪುರ ತಾಲ್ಲೂಕು ಪ್ರಾಥಮಿಕ ಶಾಲಾ
ಶಿಕ್ಷಕರ ಪತ್ತು ಬೆಳೆಸುವ ಸಹಕಾರ ಸಂಘ ನಿ.,
ಶಿಕಾರಿಪುರ
ಶಿಕಾರಿಪುರ ತಾ. ಶಿವಮೊಗ್ಗ ಜಿಲ್ಲೆ
ಇದರ ಪರವಾಗಿ ಕಾರ್ಯದರ್ಶಿ

**ವಿರುದ್ಧ**

**ಎದುರು ಅರ್ಜಿದಾರರು:**
ಹೆಚ್.ಡಿ. ದೇವಾನಂದ (ಪೌತಿ),
ಮೃತ ಕಾರ್ಯದರ್ಶಿ,
ಶಿಕಾರಿಪುರ ತಾಲ್ಲೂಕು ಪ್ರಾಥಮಿಕ
ಶಾಲಾ ಶಿಕ್ಷಕರ ಪತ್ತು ಬೆಳೆಸುವ
ಸಹಕಾರ ಸಂಘ ನಿ.,ಶಿಕಾರಿಪುರ.

**ಪೌತಿ ವಾರಸುದಾರರು**

1) ಶ್ರೀಮತಿ ಶೈಲಜಾ(ಪತ್ನಿ), ಕೋಂ. ದಿ॥ ಹೆಚ್.ಡಿ. ದೇವಾನಂದ, ಬನಶಂಕರಿ ಬೀದಿ, ಈಸೂರು, ಶಿಕಾರಿಪುರ ತಾಲ್ಲೂಕು.

2) ಕುಮಾರ ರಾಕೇಶ್ ಹೆಚ್.ಡಿ.(ಮೈನರ್) ಬಿನ್ ಹೆಚ್.ಡಿ.ದೇವಾನಂದ, ವಯಸ್ಸು ಸುಮಾರು 15 ವರ್ಷಗಳು

3) ಕುಮಾರ ಹಿತೇಶ ಹೆಚ್.ಡಿ.(ಮೈನರ್) ಬಿನ್ ಹೆಚ್.ಡಿ.ದೇವಾನಂದ, ವಯಸ್ಸು ಸುಮಾರು 13 ವರ್ಷಗಳು

**ಮೈನರ್ ಗಾರ್ಡಿಯನ್**

ಶ್ರೀಮತಿ ಶೈಲಜಾ, ಕೋಂ. ದಿ:ಹೆಚ್.ಡಿ.ದೇವಾನಂದ, ಬನಶಂಕರಿ ಬೀದಿ, ಈಸೂರು, ಶಿಕಾರಿಪುರ ತಾಲ್ಲೂಕು.

**–: ಆದೇಶ :–**

**(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತು ಆದೇಶ)**

**ಪ್ರಸ್ತಾವನೆ :–**

ಅರ್ಜಿದಾರ ಸಂಘ ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ಎದುರುಅರ್ಜಿದಾರರು, ಅರ್ಜಿದಾರ ಸಂಘದಲ್ಲಿ ದುರುಪಯೋಗಪಡಿಸಿಕೊಂಡಿರುವ ಮೊಬಲಗು ರೂ.12,57,583–00 ಗಳನ್ನು ಸಾಲಿಯಾನ ಶೇ.18ರ ಬಡ್ಡಿಯೊಂದಿಗೆ ವಸೂಲಾತಿಗಾಗಿ ಎದುರಿಯ ವಿರುದ್ಧ ದಾವಾ ಅರ್ಜಿಯನ್ನು ದಾಖಲು ಮಾಡಿರುತ್ತಾರೆ. ಈ ದಾವಾ ಅರ್ಜಿಯನ್ನು ವಿಚಾರಣೆಗೆ ಕೈಗೆತ್ತಿಕೊಂಡು, ದಾವಾ ಅರ್ಜಿ ಸಂಖ್ಯೆ: ಡಿಆರ್ಎಸ್/ಡಿಡಿಎಸ್/ಎಂಐಎಸ್‌ಸಿ/01/2011–12 ಎಂದು ನಂಬರ್ ನೀಡಲಾಗಿದೆ. ಈ ದಾವಾ ಅರ್ಜಿಯೊಂದಿಗೆ ಅರ್ಜಿದಾರರು ಮಧ್ಯಂತರ ಅರ್ಜಿ ಸಲ್ಲಿಸಿ, ಕಲಂ 103ರನ್ವಯ ಅರ್ಜಿದಾರ ಸಂಘ, ಎದುರುದಾರರ ವಿರುದ್ಧ ವಸೂಲಾತಿಗಾಗಿ ಕಾಯ್ದೆ ಕಲಂ 70 ರಡಿಯಲ್ಲಿ ಅರ್ಜಿದಾರ ಸಂಘದ ಪರವಾಗಿ ಡಿಕ್ರಿ ಕೋರಿ ಪ್ರಕರಣ ದಾಖಲಿಸಿದ್ದು, ಸದರೀ ಹಣವು ವಸೂಲಾತಿ ಆಗದಿರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ ಮೇಲ್ಕಂಡ ದಾವಾ ಅರ್ಜಿಯಲ್ಲಿನ ಎದುರುದಾರರ ಸ್ಥಿರಾಸ್ತಿಯನ್ನು ದಾವಾ ಅರ್ಜಿಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಬಾರೆ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಲು ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಕ್ರಮವನ್ನು ಕೋರಿದ್ದರು, ಅದರಂತೆ, ತೀರ್ಪು ಪೂರ್ವ ಷರತ್ತುಬದ್ಧ ಜಪ್ತು ಆದೇಶದ ನೋಟಿಸನ್ನು ದಿನಾಂಕ:18–02–2012 ರಂದು ಹೊರಡಿಸಿದ್ದು, ಸದರಿ ನೋಟೀಸನ್ನು ಎದುರು ಅರ್ಜಿದಾರರುಗಳು ಪಡೆದಿರುತ್ತಾರೆ. ಈ ಬಗ್ಗೆ ಸ್ವೀಕೃತಿ ಲಭ್ಯವಿರುತ್ತದೆ. ಆದರೂ ಸಹ ಸದರಿ ನೋಟೀಸಿನಲ್ಲಿನ ಷರತ್ತುಗಳನ್ನು ಪೂರೈಸಲು ಎದುರುಅರ್ಜಿದಾರರು ವಿಫಲರಾಗಿರುವುದರಿಂದ ದಿ:18–02–2012ರಂದು ಹೊರಡಿಸಿದ ಷರತ್ತು ಪೂರ್ವ ಜಪ್ತು ಆಜ್ಞೆಯನ್ನು ಸ್ಥಿರೀಕರಣಗೊಳಿಸಲು ತೀರ್ಮಾನಿಸಿ(ಖಾಯಂಗೊಳಿಸಿ) ಈ ಕೆಳಕಂಡಂತೆ ಆದೇಶಿಸಿದೆ.

**ಸಂ:ಡಿಆರ್ಎಸ್/ಎಬಿಎನ್/ಕಲಂ–103/2011–12, ದಿನಾಂಕ:30–03–2012**

**: ಆ ದೇ ಶ :**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಗಾಗಿ ಅಶೋಕ.ವೆಂ.ಮೊರಬ, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ.ಸಿಓ/139/ಸಿಎಲ್ಎಂ/2010 ಬೆಂಗಳೂರು ದಿನಾಂಕ:17–02–2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಈ ಆದೇಶದೊಂದಿಗೆ ಇರುವ ಅನುಸೂಚಿಯಲ್ಲಿ ಕಾಣಿಸಿರುವ ಎದುರುಅರ್ಜಿದಾರರ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯ ತೀರ್ಪನ್ನು ಕಾಯ್ದಿರಿಸಿ, ದಿನಾಂಕ:18–02–2012ರ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಿ, ಆದೇಶಿಸಿದೆ.

ಈ ಆದೇಶದ ಅನುಸೂಚಿಯಲ್ಲಿರುವ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ತೀರ್ಪು ಪೂರ್ವ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಷರತ್ತು ಪೂರ್ವಕ ಜಪ್ತು ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ**

| ಕ್ರ. ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಅಸೆಸ್‌ಮೆಂಟ್ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1 | ಶ್ರೀ ಹೆಚ್.ಡಿ.ದೇವಾನಂದ, ಬಿನ್ ಬೆನಕಪ್ಪ, | ಶಿಕಾರಿಪುರ ತಾಲ್ಲೂಕಿನ ಈಸೂರು ಗ್ರಾಮ | 414/415 | 15 ಅಡಿ x 138 ಅಡಿ ನಿವೇಶನದಲ್ಲಿ ಇರುವ ಆರ್‌ಸಿಸಿ ವಾಸದ ಮನೆ | ಆರ್‌ಸಿಸಿ ವಾಸವ ಮನೆ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ದಿನಾಂಕ:30–03–2012 ರಂದು ತೆರೆದ ನ್ಯಾಯಾಲಯದಲ್ಲಿ ನೀಡಿದೆ.

**ಅಶೋಕ.ವೆಂ.ಮೊರಬ,**
ಸಹಕಾರ ಸಂಘಗಳ ಉಪನಿಬಂಧಕರು,
ಶಿವಮೊಗ ಜಿಲ್ಲೆ, ಶಿವಮೊಗ್ಗ.

**ಪಿ.ಆರ್. 504**

## ನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, ಸಂಪಿಗೆ ರಸ್ತೆ, 18ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು–12

### ಪದವಿ ಪೂರ್ವ ಶಿಕ್ಷಣ ಇಲಾಖಾ ನಿರ್ದೇಶಕರ ನಡವಳಿಗಳು

ವಿಷಯ : ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು, ಇವರ ದೀರ್ಘಕಾಲದ ಅನಧಿಕೃತ ಗೈರುಹಾಜರಿಯ ಕುರಿತು ಕ್ರಮ ಜರುಗಿಸುವ ಬಗ್ಗೆ.

ಉಲ್ಲೇಖ:

1. ಪ್ರಾಚಾರ್ಯರು, ಸರ್ಕಾರಿ ಪದವಿ ಪೂರ್ವ ಕಾಲೇಜು, ರಿಪ್ಪನ್‌ಪೇಟೆ, ಹೊಸನಗರ ತಾಲ್ಲೂಕ್, ಶಿವಮೊಗ್ಗ ಜಿಲ್ಲೆ ಇವರ ಪತ್ರ ದಿನಾಂಕ: 11–11–2009.
2. ಶಿವಮೊಗ್ಗ ಜಿಲ್ಲೆಯ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರವರ ವರದಿ ಸಂಖ್ಯೆ:ಪಪೂಶಿಇ/ಉನಿಕಶಿ/ಎ1/ಅಗೈಹಾ/09–10 ದಿನಾಂಕ:14–12–2009.
3. ಈ ಕಛೇರಿಯ ಸಮಸಂಖ್ಯೆಯ ಪತ್ರ ದಿನಾಂಕ:26–03–2010.
4. ಶಿವಮೊಗ್ಗ ಜಿಲ್ಲೆಯ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರವರ ವರದಿ ಸಂಖ್ಯೆ:ಪಪೂಶಿಇ/ಉನಿಕಶಿ/ಎ1/ಅಗೈಹಾ/09–10 ದಿನಾಂಕ:15–04–2010.
5. ಈ ಕಛೇರಿ ಜ್ಞಾಪನ ಸಂಖ್ಯೆ:ಪಪೂಶಿಇ/ಟಿಟಿ035/ಗೈಹಾ/2009–10, ದಿನಾಂಕ:17–08–2010.
6. ಈ ಕಛೇರಿ ಅರೆಸರ್ಕಾರಿ ಪತ್ರ ಸಂಖ್ಯೆ:ಪಪೂಶಿಇ/ಟಿಟಿ035/ಗೈಹಾ/2009–10 ದಿನಾಂಕ:07–09–2010.
7. ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರು ದಿನಾಂಕ:30–08–2010 ರಂದು ಪ್ರಾಚಾರ್ಯರಿಗೆ ಸಲ್ಲಿಸಿರುವ ಮನವಿ.
8. ಪ್ರಾಚಾರ್ಯರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ದ ಕ ಜಿಲ್ಲೆ ಇವರ ಪತ್ರ ಸಂಖ್ಯೆ:1/ಸಪಪೂಕಾ/ಮುಲ್ಕಿ/ಕರ್ತವ್ಯಕ್ಕೆ ಸೇರ್ಪಡೆಗೊಳ್ಳದಿರುವ ಬಗ್ಗೆ/2010–11 ದಿನಾಂಕ:22–09–2010.
9. ಶಿವಮೊಗ್ಗ ಜಿಲ್ಲೆಯ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರವರ ಪತ್ರ ಸಂಖ್ಯೆ:ಪಪೂಶಿಇ/ಉನಿಕಶಿ/ಎ1/ಅಗೈಹಾ/2009–10 ದಿನಾಂಕ:18–09–2010.
10. ಪ್ರಾಚಾರ್ಯರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ದ ಕ ಜಿಲ್ಲೆ, ಇವರ ಪತ್ರ ಸಂಖ್ಯೆ:2/ಸಪಪೂಕಾ/ಮುಲ್ಕಿ/ಕರ್ತವ್ಯಕ್ಕೆ ಸೇರ್ಪಡೆಗೊಳ್ಳದಿರುವ ಬಗ್ಗೆ/2010–11 ದಿನಾಂಕ:03–01–2011.
11. ದಿನಾಂಕ:26–03–2011ರ ಈ ಕಛೇರಿಯ ಪತ್ರ.
12. ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು, ಇವರ ಮೇಲಿನ ಆರೋಪಗಳ ಕುರಿತು ಇಲಾಖಾ ವಿಚಾರಣೆಯನ್ನು ನಡೆಸಲು ಆರೋಪಣಾ ಪಟ್ಟಿಯನ್ನು ಜಾರಿಗೊಳಿಸುವ ಕುರಿತು ಜಿಲ್ಲಾ ಉಪ ನಿರ್ದೇಶಕರವರಿಗೆ ಈ ಕಛೇರಿಯಿಂದ ಬರೆದ ಪತ್ರ ದಿನಾಂಕ: 30–03–2011.
13. ಪ್ರಾಚಾರ್ಯರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ದ ಕ ಜಿಲ್ಲೆ, ಇವರ ಪತ್ರ ದಿನಾಂಕ:22–03–2011.
14. ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ವರದಿ ಸಂಖ್ಯೆ:ಪಪೂಶಿಇ/ಉನಿಕಶಿ/ಎ1/ಅಗೈಹಾ/2009–10 ದಿನಾಂಕ:11–04–2011.
15. ಅಂಚೆ ಕಛೇರಿಯಿಂದ ಹಿಂದಿರುಗಿ ಬಂದ ಲಕೋಟೆ ದಿನಾಂಕ:21–04–2011.
16. ಪ್ರಾಚಾರ್ಯರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ದ ಕ ಜಿಲ್ಲೆ ಇವರ ಪತ್ರ ದಿನಾಂಕ:07–06–2011.
17. ದಿನಾಂಕ:19–07–2011ರ ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ಹಾಗೂ ಸಂಯುಕ್ತ ಕರ್ನಾಟಕ ದಿನಪತ್ರಿಕೆಗಳು.
18. ದಿನಾಂಕ:24–07–2011ರ ದಿ ನ್ಯೂಇಂಡಿಯನ್ ಎಕ್ಸ್‌ಪ್ರೆಸ್ ಹಾಗೂ ಸಂಯುಕ್ತ ಕರ್ನಾಟಕ ದಿನಪತ್ರಿಕೆಗಳು.
19. ಈ ಕಛೇರಿಯ ಅಂತಿಮ ತಿಳುವಳಿಕೆ ನೋಟೀಸ್ ದಿನಾಂಕ:03–08–2011.
20. ಪ್ರಾಚಾರ್ಯರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ದ ಕ ಜಿಲ್ಲೆ ಇವರ ಪತ್ರ ದಿನಾಂಕ:06–08–2011.
21. ಶಿವಮೊಗ್ಗ ಜಿಲ್ಲೆಯ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರವರ ವರದಿ ಸಂಖ್ಯೆ:ಪಪೂಶಿ/ಉನಿ–ಟಿಟಿ/ಎ1ಅಗೈಹಾ/2009–10 ದಿನಾಂಕ: 04–08–2011.
22. ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಪತ್ರ ದಿನಾಂಕ:02–09–2011.
23. ಅಂಚೆ ಕಛೇರಿಯಿಂದ ಹಿಂದರುಗಿ ಬಂದ ಲಕೋಟೆ ದಿನಾಂಕ:19–08–2011.
24. ಶಿವಮೊಗ್ಗ ಜಿಲ್ಲೆಯ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರವರ ವರದಿ ಸಂಖ್ಯೆ:ಪಪೂಶಿ/ಉನಿಕಶಿ/ಎ1/ಆಗೈಹಾ/09–10 ದಿನಾಂಕ: 16–09–2011.
25. ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರ ಮನವಿ ಪತ್ರ ದಿನಾಂಕ:05–09–2011.

ಪ್ರಾಚಾರ್ಯರು, ಸರ್ಕಾರಿ ಪದವಿ ಪೂರ್ವ ಕಾಲೇಜು, ರಿಪ್ಪನ್‌ಪೇಟೆ, ಹೊಸನಗರ ತಾಲ್ಲೂಕ್, ಶಿವಮೊಗ್ಗ ಜಿಲ್ಲೆ ಇವರು ಉಲ್ಲೇಖ–1 ರಲ್ಲಿರಿಸಿದ ಪತ್ರದಲ್ಲಿ ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು, ದಿನಾಂಕ:29–12–2003 ರಿಂದ ಕರ್ತವ್ಯ ನಿರ್ವಹಿಸುತ್ತಿದ್ದು,

ಸದರಿಯವರ ಸೇವಾಪುಸ್ತಕವನ್ನು ಪರಿಶೀಲಿಸಲಾಗಿ ನವೆಂಬರ್–2007 ರಿಂದ ಆಗಿಂದ್ದಾಗ್ಗೆ ವೈದ್ಯಕೀಯ ರಜೆ, ವೇತನರಹಿತ ರಜೆ ಮೇಲೆ ತೆರಳುತ್ತಿರುವುದರಿಂದ, ವಿದ್ಯಾರ್ಥಿಗಳ ಪಾಠ ಪ್ರವಚನಗಳಿಗೆ ತೊಂದರೆಯಾಗುತ್ತಿದ್ದು, ಸದರಿಯವರು ಕರ್ತವ್ಯಕ್ಕೆ ಹಾಜರಾಗುವವರೆಗೆ ಬದಲಿ ವ್ಯವಸ್ಥೆಯನ್ನು ಮಾಡುವಂತೆ ಕೋರಿರುತ್ತಾರೆ. ಪ್ರಾಚಾರ್ಯರ ಪತ್ರವನ್ನು ಮುಂದಿನ ಕ್ರಮಕ್ಕಾಗಿ ಜಿಲ್ಲಾ ಉಪ ನಿರ್ದೇಶಕರವರು ಉಲ್ಲೇಖ–2 ರಲ್ಲಿರಿಸಿದ ಪತ್ರದಲ್ಲಿ ಈ ಕಛೇರಿಗೆ ಸಲ್ಲಿಸಿರುತ್ತಾರೆ. ಉಲ್ಲೇಖ–3 ರಲ್ಲಿರಿಸಿದ ಈ ಕಛೇರಿಯ ಪತ್ರದಲ್ಲಿ ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರ ಅನಧಿಕೃತ ಗೈರುಹಾಜರಿಯ ಕುರಿತಂತೆ ಕೆಲವು ಮಾಹಿತಿಗಳನ್ನು ಸದರಿ ಕಾಲೇಜದ ಪ್ರಾಚಾರ್ಯರಿಂದ ಪಡೆದು ಪೂರಕ ದಾಖಲೆಗಳೊಂದಿಗೆ ಅಭಿಪ್ರಾಯ ನೀಡಿ, ವರದಿ ಸಲ್ಲಿಸಲು ಜಿಲ್ಲಾ ಉಪ ನಿರ್ದೇಶಕರವರಿಗೆ ತಿಳಿಸಲಾಗಿತ್ತು.

ಉಲ್ಲೇಖ–4 ರಲ್ಲಿರಿಸಿದ ಪತ್ರದಲ್ಲಿ ಶಿವಮೊಗ್ಗ ಜಿಲ್ಲೆಯ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರವರು ವರದಿಯನ್ನು ನೀಡಿರುತ್ತಾರೆ. ಶ್ರೀಮತಿ ಸಯಿದ ನಯೀಮುನ್ನೀಸ ಇವರಿಗೆ ದಿನಾಂಕಃ 03–07–2009 ರಿಂದ 03–10–2009 ರವರೆಗೆ 3 ತಿಂಗಳು ವೇತನ ರಹಿತ ರಜೆಯನ್ನು ಧೈಹಿಕ ಸಾಮರ್ಥ್ಯ ಕಾಯ್ದಿರಿಸಿ ಮಂಜೂರು ಮಾಡಲಾಗಿದೆಯೆಂದು ದಿನಾಂಕಃ01–01–2010 ರಿಂದ ಇಲ್ಲಿಯವರೆಗೂ ರಜಾ ಮಂಜೂರು ಮಾಡಿಲ್ಲವೆಂದು, ದಿನಾಂಕಃ04–10–2009 ರಿಂದ 30–12–2009 ರವರೆಗೆ ಅನಧಿಕೃತ ಗೈರುಹಾಜರಾಗಿರುತ್ತಾರೆಂದು, ಸದರಿ ಉಪನ್ಯಾಸಕರು, ದಿನಾಂಕಃ30–12–2009ರ ಮನವಿಯ ಮೂಲಕ ವೈದ್ಯಕೀಯ ರಜೆ ಮಂಜೂರು ಮಾಡಲು ಕೋರಿದ್ದು, ಮನವಿಯ ಜೊತೆ ಯಾವುದೇ ವೈದ್ಯರ ಪತ್ರ ಇರದಿದ್ದರಿಂದ ರಜೆ ಮಂಜೂರಾತಿಯನ್ನು ಕಾಯ್ದಿರಿಸಿರುತ್ತಾರೆಂದು ಪ್ರಾಂಶುಪಾಲರು ತಿಳಿಸಿರುತ್ತಾರೆ. ಸದರಿ ಉಪನ್ಯಾಸಕರು ಪದೇ ಪದೇ ವೈದ್ಯಕೀಯ ಕಾರಣಗಳ ಮೇಲೆ ರಜೆ ಹಾಕುವುದರಿಂದ ಅವರು ಧೈಹಿಕವಾಗಿ ಸಧೃಡವಾಗಿಲ್ಲದ ಕಾರಣ ಶಿಸ್ತು ಕ್ರಮ ಜರುಗಿಸುವುದು ಸೂಕ್ತವೆಂದು ಉಪ ನಿರ್ದೇಶಕರವರು ವರದಿ ನೀಡಿರುತ್ತಾರೆ.

ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ರಿಪ್ಪನ್‌ಪೇಟೆ, ಹೊಸನಗರ ತಾಲ್ಲೂಕ್, ಶಿವಮೊಗ್ಗ ಜಿಲ್ಲೆ ಇವರು ದಿನಾಂಕಃ04–10–2009 ರಿಂದ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯಲೋಪ ಎಸಗಿದ್ದು, ಸದರಿಯವರ ವಿರುದ್ಧ ಶಿಸ್ತುಕ್ರಮ ಜರುಗಿಸಲು ಉದ್ದೇಶಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು 2007ರ ನಿಯಮ 4(2) ಮತ್ತು ಸರ್ಕಾರದ ಆದೇಶ ಸಂಖ್ಯೆಃಡಿಪಿಎಆರ್4 ಎಸ್‌ಟಿಆರ್ 2001 ದಿನಾಂಕಃ22–11–2001ರ ಕಂಡಿಕೆ 7.1 (ಎಫ್)ರ ಪ್ರಕಾರ ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರನ್ನು ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿಗೆ ವರ್ಗಾಯಿಸಿ ಉಲ್ಲೇಖ–5 ರಲ್ಲಿರಿಸಿದ ಈ ಕಛೇರಿಯ ಜ್ಞಾಪನ ದಿನಾಂಕಃ17–08–2010 ರಲ್ಲಿ ಆದೇಶಿಸಲಾಗಿದೆ.

ಉಲ್ಲೇಖ–6 ರಲ್ಲಿರಿಸಿದ ಈ ಕಛೇರಿಯ ಅರೆಸರ್ಕಾರಿ ಪತ್ರದಲ್ಲಿ ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರು ದಿನಾಂಕಃ04–10–2009 ರಿಂದ ಅನಧಿಕೃತ ಗೈರುಹಾಜರಾಗಿ ಕರ್ತವ್ಯಲೋಪ ಎಸಗಿದ್ದು, ಸದರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕರಡು ಆರೋಪಣಾ ಪಟ್ಟಿಯನ್ನು ಸಿದ್ದಪಡಿಸಿ, ಆರೋಪಣಾ ಪಟ್ಟಿ ಹಾಗೂ ಆರೋಪಣಾ ಪಟ್ಟಿಗೆ ಸಂಬಂಧಿಸಿದಂತಿರುವ ಪೂರಕ ದಾಖಲೆಗಳನ್ನು ಸಲ್ಲಿಸುವಂತೆ ಶಿವಮೊಗ್ಗ ಜಿಲ್ಲೆಯ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರವರಿಗೆ ತಿಳಿಸಲಾಗಿದೆ. ಹಾಗೂ ರಿಪ್ಪನ್‌ಪೇಟೆಯ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಅರ್ಥಶಾಸ್ತ್ರ ಉಪನ್ಯಾಸಕರ ಹುದ್ದೆಗೆ ನಿಯೋಜನೆ ಆಧಾರದ ಮೇರಗೆ ಸ್ಥಳೀಯವಾಗಿ ವ್ಯವಸ್ಥೆ ಮಾಡಲು ತಿಳಿಸಲಾಗಿದೆ.

ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರು ಉಲ್ಲೇಖ–7 ರಲ್ಲಿರಿಸಿದ ಪತ್ರದಲ್ಲಿ ಸದರಿ ಕಾಲೇಜಿನ ಪ್ರಾಚಾರ್ಯರಿಗೆ ಮನವಿ ಸಲ್ಲಿಸಿ, ದಿನಾಂಕಃ03–07–2009 ರಿಂದ ವೈದ್ಯಕೀಯ ರಜೆ ಮೇಲೆ ಇದ್ದು, ಪುನಃ 03–10–2009 ರಂದು ವೈದ್ಯಕೀಯ ಪ್ರಮಾಣ ಪತ್ರದೊಂದಿಗೆ ರಜೆಯನ್ನು ಮುಂದುವರೆಸಿದ್ದು ಸರಿಯಷ್ಟೆ. ಆದರೆ ನನ್ನ ಆರೋಗ್ಯ ಸ್ಥಿತಿ ಸುಧಾರಿಸಿರುವುದಿಲ್ಲದಿರುವುದರಿಂದ ವೈದ್ಯರನ್ನು ಸಂಪರ್ಕಿಸಲಾಗಿ, ಅವರ ಸಲಹೆ ಮೇರೆಗೆ ಆರೋಗ್ಯ ಸುಧಾರಿಸುವವರೆಗೆ ರಜೆ ಮುಂದುವರೆಸಲು ತಿಳಿಸಿದ್ದು, ಪ್ರಯುಕ್ತ ಅವರಿಗೆ ಸರಿಹೊಂದುವವರೆಗೆ ರಜೆಯನ್ನು ಕೊಡಬೇಕೆಂದು ತಿಳಿಸಿರುತ್ತಾರೆ.

ಉಲ್ಲೇಖ–8 ರಲ್ಲಿರಿಸಿದ ಪತ್ರದಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ಈ ಕಾಲೇಜಿನ ಪ್ರಾಚಾರ್ಯರು, ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು, ಇವರನ್ನು ಈ ಕಾಲೇಜಿಗೆ ವರ್ಗಾಯಿಸಿದ್ದು ಸದರಿಯವರನ್ನು ರಿಪ್ಪನ್‌ಪೇಟೆಯ ಸರ್ಕಾರಿ ಪದವಿ ಪೂರ್ವ ಕಾಲೇಜಿನಿಂದ ದಿನಾಂಕಃ 25–08–2010ರ ಅಪರಾಹ್ನದಿಂದ ಜಾರಿಗೆ ಬರುವಂತೆ ಬಿಡುಗಡೆಗೊಳಿಸಲಾಗಿದ್ದು, ಈವರೆಗೆ ಸದರಿಯವರು ಅವರ ಕಾಲೇಜಿಗೆ ಬಂದು ಸೇರ್ಪಡೆಗೊಂಡಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಶಿವಮೊಗ್ಗ ಜಿಲ್ಲೆಯ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರವರು ಉಲ್ಲೇಖ–9 ರಲ್ಲಿರಿಸಿದ ವರದಿಯಲ್ಲಿ ಶ್ರೀಮತಿ ಸಯೀದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕರಡು ಆರೋಪಣಾ ಪಟ್ಟಿಯನ್ನು ಸಿದ್ದಪಡಿಸಿ, ಆರೋಪಣಾ ಪಟ್ಟಿಗೆ ಸಂಬಂಧಿಸಿದಂತಿರುವ ಪೂರಕ ದಾಖಲೆಗಳನ್ನು ಲಗತ್ತಿಸಿ ಸಲ್ಲಿಸಿರುತ್ತಾರೆ.

ಪ್ರಾಚಾರ್ಯರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ದಕ್ಷಿಣ ಕನ್ನಡ ಜಿಲ್ಲೆ ಇವರು ಉಲ್ಲೇಖ–10 ರಲ್ಲಿರಿಸಿದ ಪತ್ರದಲ್ಲಿ, ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಈ ಕಾಲೇಜಿನಲ್ಲಿ ಇದೂವರೆಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು, ಪತ್ರ ಮುಖೇನವೇ ರಜೆ ಮಂಜೂರಾತಿಗಾಗಿ ಮನವಿಯನ್ನು ಸಲ್ಲಿಸಿರುತ್ತಾರೆಂದು ತಿಳಿಸಿರುತ್ತಾರೆ.

ಉಲ್ಲೇಖ–11 ರಲ್ಲಿರಿಸಿದ ಪತ್ರದಲ್ಲಿ ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರಿಗೆ ಅನುಬಂಧ – I ರಿಂದ IV ರಲ್ಲಿ ಆರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿದೆ.

ಉಲ್ಲೇಖ–12 ರಲ್ಲಿರಿಸಿದ ಪತ್ರದಲ್ಲಿ ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರಿಗೆ ಆರೋಪಣಾ ಪಟ್ಟಿಯನ್ನು ಖುದ್ದು ತಲುಪಿಸುವಂತೆ ಜಿಲ್ಲಾ ಉಪ ನಿರ್ದೇಶಕರವರಿಗೆ ತಿಳಿಸಲಾಗಿದೆ.

ಪ್ರಾಚಾರ್ಯರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ದಕ್ಷಿಣ ಕನ್ನಡ ಜಿಲ್ಲೆ ಇವರು ಉಲ್ಲೇಖ–13 ರಲ್ಲಿರಿಸಿದ ಪತ್ರದಲ್ಲಿ, ಶ್ರೀಮತಿ ಸಯೀದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರು ಇದೂವರೆಗೂ ಸದರಿ ಕಾಲೇಜಿಗೆ ಸೇರ್ಪಡೆಗೊಂಡಿರುವುದಿಲ್ಲವೆಂದು, ವೈದ್ಯಕೀಯ ರಜೆಯನ್ನು ಮುಂದುವರೆಸುವಂತೆ ಪತ್ರ ಮುಖೇನವೇ ವ್ಯವಹರಿಸಿದ್ದಾರೆಂದು ತಿಳಿಸಿರುತ್ತಾರೆ.

ಉಲ್ಲೇಖ–14 ರಲ್ಲಿರಿಸಿದ ಪತ್ರದಲ್ಲಿ ಶಿವಮೊಗ್ಗ ಜಿಲ್ಲೆಯ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರವರು ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರ ಮೇಲಿನ ಆರೋಪಗಳ ಕುರಿತು ವಿಚಾರಣೆ ನಡೆಸಲು, ಕಳುಹಿಸಿರುವ ಆರೋಪಣಾ ಪಟ್ಟಿಯನ್ನು ಜಾರಿಗೊಳಿಸಲು ದಿನಾಂಕ:08–04–2011 ರಂದು ಅವರ ನೀಡಿರುವ ವಿಳಾಸಕ್ಕೆ ಖುದ್ದಾಗಿ ಭೇಟಿ ನೀಡಿದಾಗ, ಸದರಿಯವರು ಆ ವಿಳಾಸದಲ್ಲಿ ವಾಸವಿರುವುದಿಲ್ಲವೆಂದು ತಿಳಿಸಿ, ಆರೋಪಣಾ ಪಟ್ಟಿಯನ್ನು ಹಿಂದಿರುಗಿಸಿರುತ್ತಾರೆ.

ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರಿಗೆ ಆರೋಪಣಾ ಪಟ್ಟಿಯನ್ನು ಜಾರಿಗೊಳಿಸುವ ಕುರಿತು ಅವರ ವಿಳಾಸಕ್ಕೆ ನೊಂದಾಯಿತ ಅಂಚೆ ಮೂಲಕ ಕಳುಹಿಸಿದ್ದು, ಉಲ್ಲೇಖ–15 ರಲ್ಲಿರಿಸಿದ ಲಕೋಟೆಯ ಮೇಲೆ ಅಂಚೆ ಇಲಾಖೆಯವರು Absent ಎಂದು ನಮೂದಿಸಿ ಲಕೋಟೆಯನ್ನು ಹಿಂದಿರುಗಿಸಿರುತ್ತಾರೆ.

ಪ್ರಾಚಾರ್ಯರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ದಕ್ಷಿಣ ಕನ್ನಡ ಜಿಲ್ಲೆ ಇವರು ಉಲ್ಲೇಖ–16 ರಲ್ಲಿರಿಸಿದ ಪತ್ರದಲ್ಲಿ ಶ್ರೀಮತಿ ಸಯಿದ ನಯೀಮುನ್ನೀಸ ಇವರು ಸದರಿ ಕಾಲೇಜಿಗೆ ಈವರೆಗೂ ಸೇರ್ಪಡೆಗೊಂಡಿರುವುದಿಲ್ಲವೆಂದು, ಈ ಕಾಲೇಜಿನಲ್ಲಿ ಪೂರ್ಣಕಾಲಿಕ ಸೇವೆಯಲ್ಲಿ ಅರ್ಥಶಾಸ್ತ್ರ ಬೋಧಿಸಲು ಉಪನ್ಯಾಸಕರು ಇಲ್ಲದಿರುವುದರಿಂದ ವಿದ್ಯಾರ್ಥಿಗಳ ಕಲಿಕೆಗೆ ತೊಂದರೆಯಾಗಿದ್ದು, ಗ್ರಾಮೀಣ ವಲಯದ ಬಡ ವಿದ್ಯಾರ್ಥಿಗಳ ಈ ಸಮಸ್ಯೆಗೆ ಪರಿಹಾರ ಒದಗಿಸುವಂತೆ ವಿನಂತಿಸಿರುತ್ತಾರೆ.

ಉಲ್ಲೇಖ–17 ರಲ್ಲಿರಿಸಿದ ದಿನಾಂಕ:19–07–2011ರ ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ಹಾಗೂ ಸಂಯುಕ್ತ ಕರ್ನಾಟಕ ದಿನಪತ್ರಿಕೆಗಳಲ್ಲಿ ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರಿಗೆ ಕರ್ತವ್ಯದ ಮೇಲೆ ಹಾಜರಾಗಲು ಇಚ್ಛಿಸಿದಲ್ಲಿ, ಸಕ್ಷಮ ಪ್ರಾಧಿಕಾರದ ಮುಂದೆ ಹಾಜರಾಗುವಂತೆ ತಿಳಿಸಿ, 10 ದಿನಗಳ ಅಂತಿಮ ಕಾಲವಕಾಶ ನೀಡಿ ಪತ್ರಿಕಾ ಪ್ರಕಟಣೆಯನ್ನು ನೀಡಲಾಗಿತ್ತು. ಉಲ್ಲೇಖ–18 ರಲ್ಲಿರಿಸಿದ ದಿನಾಂಕ: 24–07–2011ರ ಸಂಯುಕ್ತ ಕರ್ನಾಟಕ ಹಾಗೂ ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆಗಳಲ್ಲಿ ದಿನಾಂಕ:19–07–2011ರ ಪತ್ರಿಕಾ ಪ್ರಕಟಣೆಯ ಸಂಖ್ಯೆ:ಪಪೂಶಿ/ಟಿಟಿ035/ಗೈಹಾ/2009–10 ದಿನಾಂಕ:18–07–2011ರ ಬದಲು 15–07–2011 ಎಂದು ನಮೂದಿಸಿದ್ದು, ಸದರಿ ದಿನಾಂಕವನ್ನು 18–07–2011 ಎಂದು ತಿದ್ದುಪಡಿ ಪ್ರಕಟಣೆಯನ್ನು ಹೊರಡಿಸಲಾಗಿದೆ.

ಸದರಿ ಪತ್ರಿಕಾ ಪ್ರಕಟಣೆಗೊಂಡ 10 ದಿನಗಳೊಳಗಾಗಿ ಶ್ರೀಮತಿ ಸಯಿದ ನಯೀಮುನ್ನೀಸ ಇವರಿಗೆ ಸಕ್ಷಮ ಪ್ರಾಧಿಕಾರದ ಮುಂದೆ ಕರ್ತವ್ಯಕ್ಕೆ ಹಾಜರಾಗಲು ತಿಳಿಸಲಾಗಿದ್ದು, 10 ದಿನಗಳು ಮೀರಿದ ನಂತರವೂ ಸದರಿಯವರು ಸಕ್ಷಮ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರಿಗೆ ಕರ್ತವ್ಯಕ್ಕೆ ಹಾಜರಾಗಲು ಅಂತಿಮ ಕಾಲವಕಾಶ ನೀಡುವ ಉದ್ದೇಶದಿಂದ ಉಲ್ಲೇಖ–19 ರಲ್ಲಿರಿಸಿದ ಈ ಕಛೇರಿಯ ಪತ್ರದಲ್ಲಿ ಅಂತಿಮ ತಿಳುವಳಿಕೆ ನೋಟಿಸನ್ನು ಜಾರಿಗೊಳಿಸಲಾಯಿತು.

ಪ್ರಾಚಾರ್ಯರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ದಕ್ಷಿಣ ಕನ್ನಡ ಜಿಲ್ಲೆ ಇವರು ಉಲ್ಲೇಖ–20 ರಲ್ಲಿರಿಸಿದ ಪತ್ರದಲ್ಲಿ ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ರಿಪ್ಪನ್‌ಪೇಟೆ, ಹೊಸನಗರ ತಾಲ್ಲೂಕ್, ಶಿವಮೊಗ್ಗ ಜಿಲ್ಲೆ ಇವರನ್ನು ಈ ಕಾಲೇಜಿಗೆ ವರ್ಗಾವಣೆ ಮಾಡಲಾಗಿದ್ದು, ಸದರಿಯವರನ್ನು ಆ ಕಾಲೇಜಿನ ಕರ್ತವ್ಯದಿಂದ ದಿನಾಂಕ:25–08–2010 ಅಪರಾಹ್ನದಿಂದ ಕರ್ತವ್ಯದಿಂದ ಬಿಡುಗಡೆ ಮಾಡಲಾಗಿದ್ದು, ಸದರಿಯವರು ಈವರೆಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರನ್ನು ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ದಕ್ಷಿಣ ಕನ್ನಡ ಜಿಲ್ಲೆ ಇಲ್ಲಿಗೆ ವರ್ಗಾಯಿಸಿದ್ದರಿಂದ ದಿನಾಂಕ:25–08–2010 ರಂದು ಸರ್ಕಾರಿ ಪದವಿ ಪೂರ್ವ ಕಾಲೇಜು, ರಿಪ್ಪನ್‌ಪೇಟೆ, ಹೊಸನಗರ ತಾಲ್ಲೂಕ್, ಶಿವಮೊಗ್ಗ ಜಿಲ್ಲೆ ಈ ಕಾಲೇಜಿನ ಉಪನ್ಯಾಸಕರ ಹುದ್ದೆಯ ಕರ್ತವ್ಯದಿಂದ ಬಿಡುಗಡೆಗೊಳಿಸಿರುವುದಾಗಿಯು, ಆನಂತರ ಸದರಿ ಉಪನ್ಯಾಸಕರು ಖುದ್ದಾಗಿಯಾಗಲೀ, ಪತ್ರದ ಮುಖಾಂತರವಾಗಲೀ ಅಥವಾ ದೂರವಾಣಿ ಮುಖಾಂತರವಾಗಲಿ ಸಂಪರ್ಕಿಸಿಲ್ಲವೆಂದು ರಿಪ್ಪನ್‌ಪೇಟೆಯ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಪ್ರಾಚಾರ್ಯರು ತಿಳಿಸಿರುತ್ತಾರೆಂದು, ಶಿವಮೊಗ್ಗ ಜಿಲ್ಲೆಯ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರವರು ಉಲ್ಲೇಖ–21 ರಲ್ಲಿರಿಸಿದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ. ಅದೇ ರೀತಿ ಅವರ ಕಛೇರಿಗೂ ಸಂಪರ್ಕ ಮಾಡಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಶಿವಮೊಗ್ಗ ಜಿಲ್ಲೆಯ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರವರು ಉಲ್ಲೇಖ–22 ರಲ್ಲಿರಿಸಿದ ಪತ್ರದಲ್ಲಿ ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರು ಅನಧಿಕೃತ ಗೈರುಹಾಜರಾಗಿರುವುದರ ಬಗ್ಗೆ ಅಂತಿಮ ತಿಳುವಳಿಕೆ ನೋಟೀಸನ್ನು ಸದರಿಯವರಿಗೆ ಖುದ್ದು ವಿತರಿಸಲು ದಿನಾಂಕ:29–08–2011 ರಂದು ಭೇಟಿ ನೀಡಿದಾಗ, ಸದರಿಯವರು ಅವರು ನೀಡಿರುವ ವಿಳಾಸದಲ್ಲಿ ವಾಸವಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು, ಇವರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ತಿಳಿಸಿ ಅಂತಿಮ ತಿಳುವಳಿಕೆ ನೋಟಿಸನ್ನು ಈ ಕಛೇರಿಯಿಂದ ನೊಂದಾಯಿತ ಅಂಚೆ ಮೂಲಕ ಕಳುಹಿಸಿದ ಅಂಚೆ ಲಕೋಟೆಯ ಮೇಲೆ Not claim ಎಂದು ನಮೂದಿಸಿ, ಅಂಚೆ ಇಲಾಖೆಯವರು ಲಕೋಟೆಯನ್ನು ಉಲ್ಲೇಖ–23 ರಂತೆ ಹಿಂದಿರುಗಿಸಿರುತ್ತಾರೆ.

ಶ್ರೀಮತಿ ಸಯಿದ ನಯೀಮುನ್ನೀಸ ಇವರು ದಿನಾಂಕ:05–09–2011 ರಂದು ಮನವಿಯನ್ನು ಸಲ್ಲಿಸಿ, ಅವರ ಆರೋಗ್ಯ ಸುಧಾರಿಸದೇ ಇರುವುದರಿಂದ, ಇನ್ನೂ ಕೆಲವು ದಿನಗಳ ಕಾಲ ಬೆಡ್‌ರೆಸ್ಟ್ ಪಡೆಯಲು ವೈದ್ಯರು ಸಲಹೆ ನೀಡಿರುತ್ತಾರೆಂದು, ಅವರಿಗೆ 02 ಚಿಕ್ಕಮಕ್ಕಳಿದ್ದು ಆ ಮಕ್ಕಳ ಜವಾಬ್ದಾರಿಯು ಅವರ ಮೇಲೆ ಇರುವುದರಿಂದ ಕರ್ತವ್ಯಕ್ಕೆ ಹಾಜರಾಗಲು ಆಗಿರುವುದಿಲ್ಲವೆಂದು, 2012–ಮೇ ರವರಗೆ ವೈದ್ಯಕೀಯ ನೆಲೆಯಲ್ಲಿ

ವೈಧ್ಯಕೀಯ ರಜೆಯನ್ನು ಮಂಜೂರು ಮಾಡಲು ಕೋರಿರುವುದಾಗಿ ತಿಳಿಸಿರುತ್ತಾರೆಂದು, ಉಲ್ಲೇಖ–24 ರಲ್ಲಿರಿಸಿದ ಪತ್ರದಲ್ಲಿ ಜಿಲ್ಲಾ ಉಪ ನಿರ್ದೇಶಕರವರು ವರದಿ ಮಾಡಿರುತ್ತಾರೆ. ಹಾಗೂ ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರು ರಜೆ ಮನವಿಯೊಂದಿಗೆ ನಿಗಧಿತ ರಜಾ ಅರ್ಜಿ ನಮೂನೆ ಮತ್ತು ವೈಧ್ಯಕೀಯ ಪ್ರಮಾಣ ಪತ್ರವನ್ನು ಲಗತ್ತಿಸಿರುವುದಿಲ್ಲ ಹಾಗೂ ಈ ಹಿಂದೆ ಕರ್ತವ್ಯ ನಿರ್ವಹಿಸುತ್ತಿದ್ದ ಕಾಲೇಜಿನ ವಿಳಾಸವನ್ನು ನಮೂದಿಸಿರುತ್ತಾರೆಂದು, ಆದರೆ ಅವರ ವಾಸಸ್ಥಳದ ವಿಳಾಸ ನಮೂದಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ಇವರು ಉಲ್ಲೇಖ–25 ರಲ್ಲಿರಿಸಿದ ಮನವಿಯಲ್ಲಿ ದಿನಾಂಕಃ03–07–2009 ರಿಂದ ಕಾಲೇಜಿನ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು, ಆರೋಗ್ಯ ಇನ್ನೂ ಸುಧಾರಣೆ ಆಗದೇ ಇದ್ದು, ಇನ್ನು ಕೆಲವು ದಿನಗಳ ಕಾಲ ಬೆಡ್‌ರೆಸ್ಟ್ ಪಡೆಯಲು ವೈಧ್ಯರು ಸಲಹೆ ನೀಡಿರುತ್ತಾರೆಂದು ಹಾಗೂ 2 ಚಿಕ್ಕಮಕ್ಕಳು ಇದ್ದು, ಅವರನ್ನು ನೋಡಿಕೊಳ್ಳಲು ಯಾರು ಇಲ್ಲದೆ ಇದ್ದು, ಅವರ ಸಂಪೂರ್ಣ ಜವಾಬ್ದಾರಿಯು ಅವರ ಮೇಲಿರುತ್ತದೆಂದು, ಅದ್ದರಿಂದ ಕರ್ತವ್ಯಕ್ಕೆ ಹಾಜರಾಗಲು ಆಗದೇ ಇರುವುದರಿಂದ ಮುಂದುವರೆದ 2012–ಮೇ ವರಗೆ ವೈಧ್ಯಕೀಯ ನೆಲೆಯಲ್ಲಿ ವೇತನ ರಹಿತ ರಜೆಯನ್ನು ಮಂಜೂರು ಮಾಡಲು ಕೋರುತ್ತಾ, 2012–ಮೇ ನಂತರ ಕರ್ತವ್ಯಕ್ಕೆ ಹಾಜರಾಗಲು ಅನುವು ಮಾಡಿಕೊಡುವಂತೆ ಕೋರಿರುತ್ತಾರೆ. ಆದರೆ ಇದಕ್ಕೆ ಪೂರಕವಾಗಿ ನಿಗಧಿತ ರಜಾ ಅರ್ಜಿಯಾಗಲೀ, ವೈಧ್ಯಕೀಯ ಪ್ರಮಾಣ ಪತ್ರವನ್ನಾಗಲೀ ಲಗತ್ತಿಸಿರುವುದಿಲ್ಲ. ಈ ಮೇಲ್ಕಂಡ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಶ್ರೀಮತಿ ಸಯೀದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು ದಿನಾಂಕಃ04–10–2009 ರಿಂದ ಅನಧಿಕೃತ ಗೈರುಹಾಜರಾಗಿ ಕರ್ತವ್ಯಕ್ಕೆ ಈವರೆಗೂ ಹಾಜರಾಗಲು ವಿಫಲರಾಗಿರುವುದರಿಂದ, ಸದರಿಯವರಿಗೆ ಸರ್ಕಾರದ ಸೇವೆಯಲ್ಲಿ ಮುಂದುವರೆಯಲು ಆಸಕ್ತಿ ಇಲ್ಲವೆಂದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಕರ್ನಾಟಕ ಸರ್ಕಾರಿ ಸೇವಾ (ನಡತೆ) 1966 ನಿಯಮ 3 (i)(ii)(iii) ಗಳನ್ನು ಉಲ್ಲಂಘಿಸಿರುವುದರಿಂದ, ಸದರಿಯವರು ದುರ್ನಡತೆ ಎಸಗಿದ್ದಾರೆಂದು ತೀರ್ಮಾನಿಸಿ, ಸೂಕ್ತ ದಂಡನೆಯನ್ನು ವಿಧಿಸಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆಃಪಪೂಶಿ/ಟಟಿ035/ಗೈಹಾ/2009–10 ದಿನಾಂಕಃ31–12–2011.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಶ್ರೀಮತಿ ಸಯಿದ ನಯೀಮುನ್ನೀಸ, ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮುಲ್ಕಿ, ದಕ್ಷಿಣ ಕನ್ನಡ ಜಿಲ್ಲೆ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ–108 ಹಾಗೂ ಕರ್ನಾಟಕ ನಾಗರೀಕ ಸೇವಾ (ವಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ8 (viii) ರಂತೆ ತಕ್ಷಣದಿಂದ ಜಾರಿಗೆ ಬರುವಂತೆ "**ಸೇವೆಯಿಂದ ವಜಾಗೊಳಿಸುವ**" ದಂಢನೆಯನ್ನು ವಿಧಿಸಿ ಆದೇಶಿಸಿದೆ.

**ಶಿಸ್ತುಪ್ರಾಧಿಕಾರ ಮತ್ತು ನಿರ್ದೇಶಕರು,**
**ಪದವಿ ಪೂರ್ವ ಶಿಕ್ಷಣ ಇಲಾಖೆ.**

**ಪಿ.ಆರ್. 594**

## ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಸಂಖ್ಯೆ:ಇಎಕ್ಸ್‌ಇ/ಚಿಪುರ/ವಾ.ಮು./04/2012–13, ದಿ:02/05/2012.**

**ಸಾರ್ವಜನಿಕರ ಗಮನಕ್ಕೆ**

ವಿಷಯ:– ಅಬಕಾರಿ ವಸ್ತುಗಳನ್ನು ಅಕ್ರಮವಾಗಿ ಹೊಂದಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತುಪಡಿಸಿರುವ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯಲ್ಲಿ ಅಬಕಾರಿ ವಸ್ತುಗಳನ್ನು ಅಕ್ರಮವಾಗಿ ಹೊಂದಿ ಸಾಗಾಣಿಕೆ ಮಾಡುವ ಸಮಯದಲ್ಲಿ ಅಬಕಾರಿ / ಪೊಲೀಸ್ ಇಲಾಖೆಯವರು ಈ ಕೆಳಗೆ ನಮೂದಿಸಿದ ಹಲವು ಮೊಕದ್ದಮೆಗಳಲ್ಲಿ ಜಪ್ತುಪಡಿಸಿರುವ ವಿವಿಧ ನಮೂನೆಯ ವಾಹನಗಳ ಮಾಲೀಕತ್ವ ಹೊಂದಿರುವವರು ವಾಹನದ ಮೂಲ ದಾಖಲಾತಿಗಳೊಂದಿಗೆ ಈ ಪ್ರಕಟಣೆ ಪ್ರಕಟವಾದ ದಿನಾಂಕದಿಂದ ದಿನಾಂಕ:21/05/2012 ರೊಳಗೆ ಈ ಕೆಳ ಸಹಿ ಮಾಡಿರುವವರ ಮುಂದೆ ಖುದ್ದು ಹಾಜರಾಗತಕ್ಕದ್ದು. ತಪ್ಪಿದ್ದಲ್ಲಿ ಈ ಕೆಳಕಂಡ ಕೋಷ್ಟಕದಲ್ಲಿ ನಮೂದಿಸಿರುವ ವಾಹನಗಳಿಗೆ ವಾರಸ್ಸುದರರಿಲ್ಲವೆಂದು ಪರಿಗಣಿಸಿ ಅಬಕಾರಿ ಕಾಯ್ದೆ 1965 ರ ಕಲಂ 43(ಸಿ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಕ್ರಮ ಕೈಗೊಳ್ಳಲಾಗುವುದೆಂದು ತಿಳಿಯಪಡಿಸಿದೆ.

| ಕ್ರ. ಸಂ. | ಪ್ರ.ಮಾ.ವರದಿ ಸಂಖ್ಯೆ & ದಿನಾಂಕ | ಮೊಕದ್ದಮೆ ದಾಖಲಿಸಿದ ಅಧಿಕಾರಿಗಳ ಹೆಸರು/ ಪದನಾಮ | ವಾಹನ ವಿವರ | ನೊಂದಣಿ ಸಂಖ್ಯೆ | ಷರಾ |
|---|---|---|---|---|---|
| 01 | ಆ.ಉ.ನಿ., ಗುಡಿಬಂಡೆ ಪೊಲೀಸ್ ಠಾಣೆ ಮೊ.ಸಂ:93/2011, ದಿನಾಂಕ:07/07/2011 | ರಾಮಾಂಜಿನಪ್ಪ, ಆರಕ್ಷಕ ಉಪ ನಿರೀಕ್ಷಕರು | ಬಜಾಜ್ ಸಿಟಿ–100 | ಕೆಎ–43 ಇ–570 | ಆರೋಪಿಗೆ ಕಾರಣ ಕೇಳಿ ನೋಟೀಸ್ ಆರ್.ಪಿ.ಎ.ಡಿ. ಮೂಲಕ ರವಾನಿಸಿದ್ದು, ನೋಟೀಸ್ ಜಾರಿಯಾಗದೇ ವಾಪಸ್ಸು ಬಂದಿರುತ್ತದೆ. ಮಾಲೀಕರು ವಾಹನ ಬಿಡುಗಡೆಗೆ ಮನವಿ ಸಲ್ಲಿಸಿರುವುದಿಲ್ಲ. |

| ಕ್ರ. ಸಂ. | ಪ್ರ.ಮಾ.ವರದಿ ಸಂಖ್ಯೆ & ದಿನಾಂಕ | ಮೊಕದ್ದಮೆ ದಾಖಲಿಸಿದ ಅಧಿಕಾರಿಗಳ ಹೆಸರು/ ಪದನಾಮ | ವಾಹನ ವಿವರ | ನೊಂದಣಿ ಸಂಖ್ಯೆ | ಷರಾ |
|---|---|---|---|---|---|
| 02 | ಆ.ಉ.ನಿ., ಗ್ರಾಮಾಂತರ ಪೊಲೀಸ್ ಠಾಣೆ, ಚಿಂತಾಮಣಿ ಇವರ ಮೊ.ಸಂ:236/11, ದಿನಾಂಕ:01/09/2011 | ಡಿ.ಸಿ. ಮಂಜು, ಆರಕ್ಷಕ ಉಪ ನಿರೀಕ್ಷಕರು | ಬಜಾಜ್ ಡಿಸ್ಕವರಿ | ಕೆಎ–53 ಇ–8045 | ಆರೋಪಿಗಳಿಗೆ ಕಾರಣ ಕೇಳಿ ನೊಟೀಸ್ ಆರ್.ಪಿ.ಎ.ಡಿ. ಮೂಲಕ ರವಾನಿಸಿದ್ದು, ನೊಟೀಸ್ ಜಾರಿಯಾಗಿರುತ್ತದೆ. ಮಾಲೀಕರು ವಾಹನ ಬಿಡುಗಡೆಗೆ ಮನವಿ ಸಲ್ಲಿಸಿರುವುದಿಲ್ಲ. |
| 03 | ಅ.ನಿ., ಚಿಕ್ಕಬಳ್ಳಾಪುರ ವಲಯ ಇವರ ಮೊ.ಸಂ:03/2010–11, ದಿನಾಂಕ:20/12/2010 | ಎ.ಸಿ. ಕಾನಡೆ, ಅಬಕಾರಿ ನಿರೀಕ್ಷಕರು | ಹಿರೋ ಹೊಂಡಾ ಸ್ಪ್ಲೆಂಡರ್ | ಕೆಎ–40 ಜೆ–5725 | ಆರೋಪಿಗೆ ನೊಟೀಸ್ ಜಾರಿಯಾಗಿರುತ್ತದೆ. ಮಾಲೀಕರಿಗೆ ರವಾನಿಸಿದ ನೊಟೀಸ್ ಜಾರಿಯಾಗದೇ ಈ ಪ್ರಾಧಿಕಾರಕ್ಕೆ ವಾಪಸ್ಸು ಬಂದಿರುತ್ತದೆ. |
| 04 | ಆ.ನಿ., ಅಲಾನಿದಳ, ಚಿಕ್ಕಬಳ್ಳಾಪುರ ಇವರ ಮೊ.ಸಂ:91/2011, ದಿನಾಂಕ:01/11/2011 | ನಂಜಪ್ಪ, ಆರಕ್ಷಕ ನಿರೀಕ್ಷಕರು | ಟಿವಿಎಸ್ ಮ್ಯಾಕ್ಸ್ 4ಆರ್ | ಎಪಿ–02 ಎಹೆಚ್–3226 | ಆರೋಪಿಗೆ ನೊಟೀಸ್ ಜಾರಿಯಾಗಿರುತ್ತದೆ. ಮಾಲೀಕರ ವಿವರ ಸಾರಿಗೆ ಅಧಿಕಾರಿಗಳಿಂದ ಸ್ವೀಕೃತವಾಗಿರುವುದಿಲ್ಲ. |
| 05 | ಆ.ಉ.ನಿ., ಶಿಡ್ಲಘಟ್ಟ ಗ್ರಾಮಾಂತರ ಪೊಲೀಸ್ ಠಾಣೆ ಮೊ.ಸಂ:290/11, ದಿನಾಂಕ:27/12/2011 | ಈರಪ್ಪ, ಎ.ಎಸ್.ಐ. | ಬಜಾಜ್ ಚೇತಕ್ ಸ್ಕೂಟರ್ | ಕೆಎ–40 ಇ–7940 | ಆರೋಪಿ ಮತ್ತು ವಾಹನ ಮಾಲೀಕರಿಗೆ ನೊಟೀಸ್ ಜಾರಿಯಾಗಿರುತ್ತದೆ. ಇಲ್ಲಿಯವರೆವಿಗೂ ವಾಹನ ಮಾಲೀಕತ್ವದ ಮೂಲ ದಾಖಲಾತಿಗಳೊಂದಿಗೆ ವಾಹನ ಬಿಡುಗಡೆಗೆ ಮನವಿ ಸಲ್ಲಿಸಿರುವುದಿಲ್ಲ. |
| 06 | ಆ.ಉ.ನಿ., ಚಿಂತಾಮಣಿ ಗ್ರಾಮಾಂತರ ಪೊಲೀಸ್ ಠಾಣೆ ಮೊ.ಸಂ:314/10, ದಿನಾಂಕ:24/12/2010. | ಕೆ.ಜಿ. ಸತೀಶ್, ಆರಕ್ಷಕ ಉಪ ನಿರೀಕ್ಷಕರು | ಆಟೋ | ಕೆಎ–05 ಎ–1048 | ಆರೋಪಿಗಳಿಗೆ ನೊಟೀಸ್ ಜಾರಿಯಾಗಿರುತ್ತದೆ. ಮಾಲೀಕರು ಯಾರೂ ಎಂಬುದು ತಿಳಿದು ಬಂದಿರುವುದಿಲ್ಲ |
| 07 | ಆ.ಉ.ನಿ., ಮಂಚೇನಹಳ್ಳಿ ಪೊಲೀಸ್ ಠಾಣೆ ಇವರ ಮೊ.ಸಂ:06/2012, ದಿನಾಂಕ:17/01/2012 | ಸುಂದರ, ಆರಕ್ಷಕ ಉಪ ನಿರೀಕ್ಷಕರು | ಟಿವಿಎಸ್ ಸ್ಟಾರ್ ಸಿಟಿ | ಕೆಎ–50 ಸಿ–4186 | ಆರೋಪಿಗಳಿಗೆ ನೊಟೀಸ್ ಜಾರಿಯಾಗಿರುತ್ತದೆ. ಮಾಲೀಕರಿಗೆ ನೀಡಿದ ನೊಟೀಸ್ ಜಾರಿಯಾಗದೇ ಪ್ರಾಧಿಕಾರಕ್ಕೆ ವಾಪಸ್ಸು ಬಂದಿರುತ್ತದೆ. |
| 08 | ಆ.ಉ.ನಿ., ಮಂಚೇನಹಳ್ಳಿ ಪೊಲೀಸ್ ಠಾಣೆ ಇವರ ಮೊ.ಸಂ:14/2012, ದಿನಾಂಕ:28/01/2012 | ಸುಂದರ, ಆರಕ್ಷಕ ಉಪ ನಿರೀಕ್ಷಕರು | ಹಿರೋ ಹೊಂಡಾ ಸ್ಪ್ಲೆಂಡರ್+ | ಕೆಎ–40 ಎಲ್–2198 | ಆರೋಪಿ / ಮಾಲೀಕರಿಗೆ ನೊಟೀಸ್ ಜಾರಿಯಾಗಿರುತ್ತದೆ. ವಾಹನ ಬಿಡುಗಡೆಗೆ ಮನವಿ ಸಲ್ಲಿಸಿರುವುದಿಲ್ಲ. |
| 09 | ಆ.ಉ.ನಿ. ಅಲಾನಿದಳ, ಚಿಕ್ಕಬಳ್ಳಾಪುರ ಇವರ ಮೊ.ಸಂ:19/2012, ದಿನಾಂಕ:05/02/2012 | ಅಶ್ವತ್ಥನಾರಾಯಣ ಎಂ.ಎನ್. ಆರಕ್ಷಕ ಉಪ ನಿರೀಕ್ಷಕರು. | ಟಿವಿಎಸ್ ಎಕ್ಸ್‌ಎಲ್ ಹೆವಿಡ್ಯುಟಿ | ಕೆಎ–04 ಇಎನ್–7174 | ಆರೋಪಿಗೆ ನೊಟೀಸ್ ಜಾರಿಯಾಗಿರುತ್ತದೆ. ಮಾಲೀಕರಿಗೆ ಪ್ರಾಧಿಕಾರದಿಂದ ರವಾನಿಸಿದ ನೊಟೀಸ್ ಜಾರಿಯಾಗದೇ ವಾಪಸ್ಸು ಬಂದಿರುತ್ತದೆ. |
| 10 | ಅ.ನಿ., ಚಿಕ್ಕಬಳ್ಳಾಪುರ ಉಪ ವಿಭಾಗ ರವರ ಮೊ.ಸಂ:36/2012, ದಿನಾಂಕ:16/02/2012 | ಎಂ.ಎಸ್. ಉಷಾ, ಅಬಕಾರಿ ನಿರೀಕ್ಷಕರು | ಟಿವಿಎಸ್ ಸ್ಪೋರ್ಟ್ಸ್+ | ಕೆಎ–01 ಇಯು–6119 | ಆರೋಪಿಗೆ ನೊಟೀಸ್ ಜಾರಿಯಾಗಿರುತ್ತದೆ. ಮಾಲೀಕರಿಗೆ ಪ್ರಾಧಿಕಾರದಿಂದ ರವಾನಿಸಿದ ನೊಟೀಸ್ ಜಾರಿಯಾಗದೇ ವಾಪಸ್ಸು ಬಂದಿರುತ್ತದೆ. |

